# ಮಾನಸಿ

ತಿಂಗಳ ಪತ್ರಿಕೆ. ಏಪ್ರಿಲ್ ೧೯೯೨

# ಮಾನಸ

ಸಂಪುಟ: ೫ ಸಂಚಿಕೆ:೪

ಏಪ್ರಿಲ್ ೧೯೯೨

**ಸಂಪಾದಕೀಯ ಮಂಡಳಿ :**
ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ದು. ಸರಸ್ವತಿ,
ಸವಿತ ಎ., ಗಾಯಿತ್ರಿ ಎ.

**ಸಲಹೆ—ಸಹಕಾರ**
ಇಳಾವಿಜಯ

ವಿಳಾಸ "ಮಾನಸ ತಿಂಗಳ ಪತ್ರಿಕೆ"
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—560067

ಬಿಡಿಪ್ರತಿ:2 ರೂ.
ಸೂಚನೆ: ವಾರ್ಷಿಕ ಚಂದಾ:20ರೂ.
ಆಜೀವ ಚಂದಾ: 250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


## ಈ ಸಂಚಿಕೆಯಲ್ಲಿ..........




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ ಬೆಂಗಳೂರು—೫೬೦೦೬೭.



# ಸಂಪಾದಕೀಯ

ಇತ್ತೀಚೆಗೆ ಕೋಲಾರದಲ್ಲಿ ಕುತೂಹಲಕಾರಿ ಘಟನೆ ನಡೆದಿದೆ. ಆಸ್ಪತ್ರೆಯಲ್ಲಿ ಹೆರಿಗೆಯಾದ ನಂತರ ಇಬ್ಬರು ತಾಯಂದಿರು ಹೆಣ್ಣು ಮತ್ತು ಗಂಡು ಮಗುವಿಗೆ ಜನ್ಮವಿತ್ತಿದ್ದು ನಂತರ ಇಬ್ಬರೂ ಗಂಡುಮಗು ತನ್ನದೆಂದು ಕಾದಾಟಕ್ಕಿಳಿದುದು ಒಂದು ದೊಡ್ಡ ವಿವಾದವನ್ನೇ ಸೃಷ್ಟಿಸಿದರು. ಕೊನೆಯಲ್ಲಿ ವೈದ್ಯರು ಮಗುವಿನ ರಕ್ತ ಪರೀಕ್ಷೆ ಮಾಡುವುದರ ಮೂಲಕ "ಗಂಡು" ಮಗುವಿನ ನಿಜವಾದ ವಾರಸುದಾರಳಾದ "ತಾಯಿ"ಯನ್ನು ಗುರುತಿಸಿ ಆ ಮಗುವನ್ನು ತಾಯಿಗೆ ಒಪ್ಪಿಸಿದರು.

ಈ ಘಟನೆ ಜಗತ್ತಿನ ಪ್ರಖ್ಯಾತ ನಾಟಕವಾದ ಬ್ರೆಕ್ಟನ್-ಕಕೇಶಿಯನ್ ಚಾಕ್ ಸರ್ಕಲ್ ನಾಟಕವನ್ನು ನೆನಪಿಗೆ ತರುತ್ತದೆ. ಒಂದು ವ್ಯತ್ಯಾಸವೆಂದರೆ ನಾಟಕದಲ್ಲಿ ಇಬ್ಬರು ತಾಯಂದಿರಲ್ಲಿ ಒಬ್ಬಳು ಸಾಕು ತಾಯಿ ಇನ್ನೊಬ್ಬಳು ಹೆತ್ತವಳು. ನಾಟಕ ಬಂಡವಾಳಶಾಹಿ ಮತ್ತು ಶೋಷಿತ ವರ್ಗದ ನಡುವಿರುವ ಅಂತರದ ಸಾಮಾಜಿಕ ಪ್ರತಿಬಿಂಬವಾಗಿದ್ದರೆ ಮೇಲಿನ ಘಟನೆ ಸಮಾಜದಲ್ಲಿ ಗಂಡು-ಹೆಣ್ಣಿನ ನಡುವಿರುವ ಪಕ್ಷಪಾತದ ಧೋರಣೆಯ ಪ್ರತೀಕವಾಗಿದೆ. ಗಂಡು ಮಗುವಿಗಾಗಿ ನಡೆದ ವ್ಯಾಜ್ಯ ನಮ್ಮ ಸಮಾಜದಲ್ಲಿ ಬಲವಾಗಿ ಬೇರೂರಿರುವ ಪಿತೃಪ್ರಧಾನ ಮೌಲ್ಯದ ಸಂಕೇತವಾಗಿದೆ. ಗಂಡುಮಗು ಹುಟ್ಟಿದ ಕೂಡಲೇ ನಗು ಮೊಗದಿಂದ ಸ್ವಾಗತಿಸುವ ನಾವೇ ಸಮಾಜ ಹೆಣ್ಣು ಮಗುವನ್ನು ತಿರಸ್ಕಾರದಿಂದಲೇ ನೋಡುತ್ತದೆ.

ತಿರಸ್ಕಾರದಿಂದ ನೋಡುವುದರಿಂದಲೇ ಹೆಣ್ಣುಮಗು ಹುಟ್ಟುವ ಮೊದಲೇ ಲಿಂಗ ನಿರ್ಧಾರ ಪರೀಕ್ಷೆಯ ಮೂಲಕ ಹೆಣ್ಣು ಶಿಶುವನ್ನು ಚಿವುಟಿ ಹಾಕಲಾಗುತ್ತಿದೆ. ವೈಜ್ಞಾನಿಕ ಬೆಳವಣಿಗೆಯ ದುರುಪಯೋಗದಿಂದಾಗಿ ಭ್ರೂಣಾವಸ್ಥೆಯಲ್ಲಿಯೇ ಹೆಣ್ಣು ಮಗುವಿನ ಕೊರಳು ಹಿಸುಕಿ ಕೊಲೆಗೈಯುವ ಅನೇಕ ಶಿಶು ಹತ್ಯಾ ಕೇಂದ್ರಗಳು ಆಕರ್ಷಕ ಜಾಹಿರಾತುಗಳಿಂದ ದೇಶದ್ಯಂತ ತಲೆ ಎತ್ತುತ್ತಿವೆ. ಇಂದು ಇವು ಸಮಾಜದಲ್ಲಿ ಭದ್ರವಾಗಿ ನೆಲೆಯೂರಿರುವ ಮೌಲ್ಯಗಳನ್ನು ಬಲಪಡಿಸುವ ವ್ಯಾಪಾರದ ಕೇಂದ್ರಗಳಾಗಿವೆ. ಕಾಲ ಬದಲಾಗುತ್ತಿದೆಯೆಂದಾದರೂ, ಸ್ತ್ರೀ ಪುರುಷರಿಬ್ಬರೂ ಪುರುಷ ಪ್ರಧಾನ ಮೌಲ್ಯದ ವಿಷ ಚಕ್ರದಲ್ಲಿ ಬಂಧಿತರಾಗಿ ಕಿರುಷ ಹೊಡೆಯುತ್ತಿದ್ದಾರೆನ್ನುವುದಕ್ಕೆ ಮೇಲಿನ ನಿದರ್ಶನವೇ ಸಾಕ್ಷಿ. ಹೆಣ್ಣು ಮಗುಹುಟ್ಟಿದಲ್ಲಿ ಕಳೆದುಕೊಳ್ಳುವುದು, ಗಂಡು ಮಗುವಾದರೆ ಗಳಿಸುವುದು ಎಂಬ ಮನೋವ್ಯಾಪಾರದ ಧೋರಣೆಯೇ ಇದಕ್ಕೆ ಪ್ರಮುಖ ಕಾರಣ

ಮೂಲಭೂತವಾಗಿ ಮಹಿಳೆಯರ ಬಗೆಗಿರುವ ಧೋರಣೆಗಳು ಬದಲಾಗದೇ ಕಾಲ ಮಾತ್ರ ಬದಲಾಗುತ್ತಿದ್ದರೆ, ಹೊಸದು ಹಳೆಯದರ ನೇತ್ಯಾತ್ಮಕ ಅಂಶಗಳನ್ನು ರೂಪಾಂತರಗೊಳಿಸಿಕೊಂಡು ಪುನಃ ಬಲವಾಗಿ ಬೇರೂರುತ್ತದೆ.

# ಕಲ್ಯಾಣಮ್ಮ : ಒಂದು ನೆನಪು

"ಬಹುಮುಖ ಪ್ರತಿಭೆಯ ಕಲ್ಯಾಣಮ್ಮನನ್ನು ಮಹಿಳೆಯರಲ್ಲೆ ಅಪರೂಪದ ವ್ಯಕ್ತಿತ್ವವನ್ನು ಹೊಂದಿದ ಅಪರೂಪದ ಮಹಿಳೆಯೆಂದೇ ಕರೆಯಬಹುದು. ಶತಮಾನದ ಹಿಂದೆ ಪ್ರಚಲಿತ ಮೌಲ್ಯಗಳ ಎಲ್ಲೆಯನ್ನು ಮೀರಿ ಸಾಮಾಜಿಕ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡು, ವಿವಿಧ ಕ್ಷೇತ್ರದಲ್ಲಿ ದುಡಿದ ಈ ಮಹಿಳೆಯ ನೆನಪು ಇಂದಿಗೂ ಚೇತನಪೂರ್ಣ ಹಾಗೂ ಸ್ಫೂರ್ತಿದಾಯಕ."

"ಹಿಟ್ಟು ಅವಲಕ್ಕಿಗಳ ಮೂಲಕ್ಕೆ ಹುಟ್ಟಿದಳೊ
ಹೂಬತ್ತಿ ಹೊಸೆಯಲಿಕೆ ಮೈತಳೆದಳೊ
ಎಂಬಂತೆ ಬಾಳ ಕಳೆದಳು ಬಾಲೆ, ಹೂಮಾಲೆ
ಮುಳ್ಳು ಕಂಟೆಯ ಮೇಲೆ ತಾನೆಳೆದಳೋ"

ದ. ರಾ. ಬೇಂದ್ರೆ

ಆದರೆ ಪುಟ್ಟ ಹೃದಯವೊಂದು ಪ್ರಚಲಿತ ಮೌಲ್ಯಗಳ ವಿರುದ್ಧ ದಿಕ್ಕಿನಲ್ಲಿ ಈಜಲು ಪ್ರಯತ್ನಿಸಿ, ಯಶಸ್ವಿಯೂ ಆಯಿತು. ನೂರಾರು ಪಿಳಿ ಪಿಳಿ ಕಣ್ಣುಗಳ ಹಾಲುಗಲ್ಲಗಳ ಮಮತೆಯ ಆಸರೆಯಾಯಿತು. ಸಂಪ್ರದಾಯದ ಸಂಕೋಲೆಗಳಲ್ಲಿ ಸಿಲುಕಿ, ವೈಧವ್ಯದ ಶಾಪಗ್ರಸ್ತ ಬದುಕಿನೊಡನೆ ಹೆಣಗಾಡುತ್ತಿದ್ದ ಹೃದಯದ ತುಮುಲಗಳನ್ನು ತನ್ನೆದೆಯ ಗೂಡಿನಲ್ಲಿರಿಸಿಕೊಂಡು ಹೊಸ ಬದುಕಿನ ಹೊಸ ದಿಕ್ಕಿಗಾಗಿ ತಡಕಾಡಿತು. ವೈಧವ್ಯವೇ ಒಂದು ವರವಾಯಿತೇನೊ ಆ ಪುಟ್ಟ ಹೃದಯಕ್ಕೆ. ಇದೇ ಕಲ್ಯಾಣಮ್ಮನವರ ಜೀವಂತ ಚೈತನ್ಯ. ಇಂದಿಗೂ ಕಲ್ಯಾಣಮ್ಮನವರ ಜೀವನ ಆದರ್ಶಪ್ರಾಯವಾಗಿದೆ.

ಎಸ್. ರಾಮಸ್ವಾಮಿ ಅಯ್ಯಂಗಾರರ ದಂಪತಿಗಳಿಗೆ ೧೮೯೨ ರಲ್ಲಿ ಕಲ್ಯಾಣಮ್ಮ ಜನಿಸಿದರು. ತುಂಬು ಕುಟುಂಬದಲ್ಲಿ ಜನಿಸಿದ ಕಲ್ಯಾಣಮ್ಮ ಜೀವನದ ಕಣ್ಣು ಬಿಡುವುದರಲ್ಲೇ ಮುದುಡಿ ಹೋಯಿತು. ಸಂಪ್ರದಾಯದಂತೆ ಬಾಲ್ಯದಲ್ಲೇ ಅಂದರೆ ಹತ್ತು ವರ್ಷಕ್ಕೆ ವಿವಾಹವಾಯಿತಾದರೂ, ವಿವಾಹದ ಅರ್ಥ ತಿಳಿಯುವುದರಲ್ಲಿಯೇ ಹುಡುಗ ಅಕಾಲ ಮರಣಕ್ಕೆ ತುತ್ತಾಗಿ ಕಲ್ಯಾಣಮ್ಮ ವಿಧವೆಯಾದರು.

ವಿಧವೆಯಾದ ಮುಗ್ಧ ಎಳೆಮನಸು ಪರಿತಪಿಸುತ್ತ ಕುಳಿತುಕೊಳ್ಳಲಿಲ್ಲ. ವಾಸ್ತವದತ್ತ ಒಳಗಣ್ಣು ತೆರೆದು ಸುತ್ತಮುತ್ತಲಿನ ಪರಿಸ್ಥಿತಿಯನ್ನು ಗ್ರಹಿಸಿ ತನ್ನ ಬದುಕಿನ ನಿಜ ಹೊಳಹನ್ನು ಕಂಡುಕೊಂಡಿತು. ತಾನು ಬದುಕಬೇಕಾದ ದಿಕ್ಕಿನ ಆಯ್ಕೆಯನ್ನು ಮಾಡಲಾರಂಭಿಸಿತು. ಈ ದೃಢ ನಿರ್ಧಾರದ ಫಲವಾಗಿಯೇ ರಾತ್ರಿಯೆಲ್ಲಾ ನಿದ್ದೆಗೆಟ್ಟು ಎಲ್. ಎಸ್. ಪಾಸುಮಾಡಿದ್ದು ಭವಿಷ್ಯದ ಹೊಸ ಬದುಕಿಗೆ ತಳಪಾಯವನ್ನು ಹಾಕಿತು.

ಮುಂಜಾನೆಯಿಂದ ಸಂಜೆಯವರೆಗೆ ಮೈಮುರಿಯುವ ತುಂಬು ಕುಟುಂಬದ ಮನೆಗೆಲಸ ಬಟ್ಟೆಬರೆಗಳನ್ನು ಒಗೆಯುವುದು, ಪಾತ್ರೆ ತೊಳೆಯುವುದು, ಎಲೆ ಹಚ್ಚುವುದು ಹೀಗೆ ಯಾಂತ್ರಿಕವಾಗಿ ಹಗಲುಗಳು ಉರುಳಿ ಹೋಗುತ್ತಿದ್ದವು. ಆದರೆ ರಾತ್ರಿಯಾಯಿತೆಂದರೆ ಕಲ್ಯಾಣಮ್ಮನವರ ಹೃದಯದ ದನಿಗಳು ಬಿಚ್ಚಿಕೊಳ್ಳುತ್ತಿದ್ದವು. ತನ್ನ ದುಗುಡ ದುಮ್ಮಾನದ ಸ್ವರಗಳು, ಸೃಜನಾತ್ಮಕ ಸ್ವರೂಪವನ್ನು ಪಡೆಯ ತೊಡಗಿದವು. ಮನೆಗೆಲಸ ಮುಗಿಸಿದ ನಂತರ ಓದುವುದು, ಬರೆಯುವುದರತ್ತ ಮನಸ್ಸನ್ನು ಕಲ್ಯಾಣಮ್ಮ ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಿದ್ದರು.

**ಶಾರದಾ ಸ್ತ್ರೀ ಸಮಾಜ**

ವೈಯುಕ್ತಿಕವಾಗಿ ಎದೆಯಲ್ಲಿ ಗೂಡು ಕಟ್ಟಿದ

ನೋವು ಕೇವಲ ಪರಿತಪಿಸುವ ಮಾರ್ಗವನ್ನು ಹಿಡಿಯುದೇ, ಒಂದು ಸಾಮಾಜಿಕ ನೆಲೆಯಲ್ಲಿ ಅರ್ಥವನ್ನು ಕಂಡುಕೊಂಡಿತು, ತಾವು ವಿಧವೆಯಾಗಿದ್ದು ತಮಗೆ ಆಶ್ರಯ ನೀಡುವ ತಂದೆ–ತಾಯಿಯರು ಇದ್ದಾರೆ. ಆದರೆ ಇತ್ತ ತವರಿನ, ಅತ್ತ ಗಂಡನ ಮನೆಯ ಆಶ್ರಯವಿಲ್ಲದ ಸಾವಿರಾರು ಮಹಿಳೆಯರು ಅಸಹಾಯಕರಾಗಿ ಹೇಗೆ ಜೀವನ ನೂಡಬಹುದೆಂಬ ಆಲೋಚನೆಯೇ "ಶಾರದಾ ಸ್ತ್ರೀ ಸಮಾಜದ" ಕಲ್ಪನೆಗೆ ಮೂಲ ನೆಲೆಯಾಯಿತು.

ಸ್ತ್ರೀಯರು ಆರ್ಥಿಕವಾಗಿ ಅವರ ಕಾಲಮೇಲೆ ನಿಂತು ಸ್ವಾವಲಂಬಿಯಾಗಿ ಜೀವನ ನಡೆಸುವುದೇ ಸರಿಯಾದ ಉತ್ತರವೆಂದು ನಂಬಿದ್ದರು. ಸ್ತ್ರೀಯರು ಸ್ವಾವಲಂಬಿಯಾಗಿ ಜೀವನ ನಡೆಸಬೇಕಾದರೆ, ವಿದ್ಯಾಭ್ಯಾಸವು ಅತಿ ಮುಖ್ಯವಾದುದು. ಅಸಹಾಯಕ ಸ್ತ್ರೀಯರಿಗೆ, ಶಿಕ್ಷಣ ನೀಡುವಂತ ವಾತಾವರಣ, ಅವಕಾಶವನ್ನು ಸೃಷ್ಟಿಸಬೇಕೆಂಬುದು ಅವರ ಹೆಬ್ಬಯಕೆಯಾಯಿತು. ಈ ಆಲೋಚನೆಗಳೆಲ್ಲ ಮೊಳೆತು ಫಲ ನೀಡುವ ಸನ್ನಿವೇಶವೂ ಒದಗಿತು.

೧೯೧೩ ರಲ್ಲಿ ಕಲ್ಯಾಣಮ್ಮನವರು ಶಾರದಾ ಸ್ತ್ರೀ ಸಮಾಜವನ್ನು ಸ್ಥಾಪಿಸಿದರು. ಉಪನ್ಯಾಸ ಚರ್ಚೆಗಳನ್ನು ಏರ್ಪಡಿಸುವುದರ ಮೂಲಕ ಮಹಿಳೆಯರಲ್ಲಿ ಅರಿವನ್ನು ಮೂಡಿಸುವುದು, ಮಹಿಳೆಯರು ಪರಸ್ಪರ ವಿಚಾರ–ವಿನಿಮಯ ನಡೆಸುವುದು ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹವನ್ನು ನೀಡುವುದು, ವಿವಿಧ ವರ್ಗದ ಸ್ತ್ರೀಯರ ಏಳಿಗೆಗಾಗಿ ಶ್ರಮಿಸುವುದು, ಮಕ್ಕಳ, ಮಹಿಳೆಯರ ಆರೋಗ್ಯದ ಸುಧಾರಣೆ, ಸಾಮಾಜಿಕ ಪಿಡುಗಳಿಗೆ ಸ್ಪಂದಿಸುವುದು ಸಮಾಜದ ಉದ್ದೇಶಗಳಾಗಿದ್ದವು.

ಬೆಂಗಳೂರಿನ ಚಾಮರಾಜ ಪೇಟೆಯಲ್ಲಿ ಪ್ರಾರಂಭವಾದ ಶಾರದಾ ಸ್ತ್ರೀ ಸಮಾಜ ಬಹುಬೇಗನೆ ಪ್ರಸಿದ್ಧಿಯನ್ನು ಪಡೆಯಿತು ಹೆಣ್ಣು ಮಕ್ಕಳಿಗಾಗಿ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸಲಾಯಿತು, ಗೃಹ ಕಸುಬುಗಳ ತರಬೇತಿಯನ್ನು ಏರ್ಪಡಿಸುವುದರ ಮೂಲಕ ಬಡಮಹಿಳೆಯರು ಸ್ವಾವಲಂಬಿಯಾಗಿ ಬದುಕುವ ಅವಕಾಶವನ್ನು ಸಮಾಜ ಒದಗಿಸಿತು.

ಶಾರದಾ ಸ್ತ್ರೀ ಸಮಾಜದ ಉದ್ದೇಶ, ಕಾರ್ಯವಿಧಾನ, ಯೋಜನೆ, ಮುಂತಾದವುಗಳಿಗೆ ಮೂಲ ಚೇತನವಾಗಿದ್ದ ಕಲ್ಯಾಣಮ್ಮ ಅತೀವ ನೋವಿನಿಂದ ಸಮಾಜದಿಂದ ಹೊರಬರಬೇಕಾಯಿತು. ಅವರ ಮೇಲೆ ಹೊರಿಸಲಾದ ಅಪಾದನೆಗಳನ್ನು ಸಹಿಸಲಾರದೆ ಕಲ್ಯಾಣಮ್ಮ ಸಮಾಜದ ಕಾರ್ಯದರ್ಶಿ ಸ್ಥಾನಕ್ಕೆ ರಾಜಿನಾಮೆ ನೀಡಿ ಸಮಾಜದಿಂದ ಹೊರಬಂದರು.

ಮಕ್ಕಳ ಮನೋವಿಕಾಸಕ್ಕೆ ಮಕ್ಕಳಕೂಟ

ಎಳೆಯ ಮಕ್ಕಳಿಗೆ ನಮ್ಮ ಸಮಾಜವು ಕಲ್ಪಿಸಿಕೊಡುವ ವಾತಾವರಣ ಅವರ ಮುಂದಿನ ಜೀವನವನ್ನು ರೂಪಿಸುವುದು ಎಂಬುದು ಕಲ್ಯಾಣಮ್ಮನವರ ಬಲವಾದ ನಂಬಿಕೆಯಾಗಿತ್ತು. "ಮಕ್ಕಳು ರಾಷ್ಟ್ರದ ಆಸ್ತಿ" ಈ ದಿಶೆಯಲ್ಲಿ ತಂದೆ–ತಾಯಿಯರ ಜವಾಬ್ದಾರಿ ಅತಿ ಮುಖ್ಯವಾದದು. ಕಲ್ಯಾಣಮ್ಮನವರ ಸಾಮಾಜಿಕ ಕಲ್ಪನೆ ಮೊದಲು ಮನೆಯಿಂದ ಪ್ರಾರಂಭವಾಗುತ್ತದೆ. ಮನೆ ರಾಷ್ಟ್ರ ಕಲ್ಪನೆಯ ವಿಸ್ತೃತ ರೂಪ. ಮಕ್ಕಳಿಗೆ ಮನೆಯಲ್ಲಿ ಆರೋಗ್ಯವಂತ, ಸೃಜನಾತ್ಮಕ ಸನ್ನಿವೇಶವನ್ನು ಉಂಟು ಮಾಡಿದರೆ ಅವು ಮುಂದೆ ರಾಷ್ಟ್ರದ ಶಕ್ತಿಯಾಗಿ ರೂಪಿತವಾಗುತ್ತವೆಯೆಂದು ಕಲ್ಯಾಣಮ್ಮನವರು ಭಾವಿಸಿದ್ದರು.

ಆದರೆ ಒಂದು ಹೊತ್ತಿಗೆ ಗತಿ ಇಲ್ಲದೆ, ಉಡಲು ಬಟ್ಟೆಯಿಲ್ಲದ ನಮ್ಮ ದೇಶದಲ್ಲಿ ಮಕ್ಕಳ ಅಭಿವೃದ್ಧಿಗೆ ಸೌಲಭ್ಯಗಳನ್ನು ಎಲ್ಲಿಂದ ಒದಗಿಸುವುದು, ಇದು ಹೇಗೆ ಸಾಧ್ಯ ಎಂಬ ಸಮಸ್ಯೆ ಅವರನ್ನು ಆಳವಾಗಿ ಕಾಡತೊಡಗಿತು, ಜೊತೆಗೆ ಹಾಲುಗಲ್ಲದ ಎಳೆಯ ಮಕ್ಕಳ ಮೇಲೆ ಕಲ್ಯಾಣಮ್ಮನವರಿಗೆ ಎಲ್ಲಿಲ್ಲದ ಮಮತೆ, ಮಕ್ಕಳನ್ನು ಕಂಡರೆ ಅವರ ಹೃದಯದ ಪ್ರೀತಿ ಉಕ್ಕಿ ಹರಿಯುತ್ತಿತ್ತು. ಅಂಗಳದಲ್ಲಿ ಆಡುವ, ಸ್ಕೂಲಿಗೆ ಹೋಗುವ ಮಕ್ಕಳನ್ನು ನೋಡಿದರೆ ಈ ಮಕ್ಕಳಲ್ಲಿ ಅಡಗಿರುವ ಗುಪ್ತ ಚೈತನ್ಯವನ್ನು ಸರಿಯಾದ ಮಾರ್ಗದಲ್ಲಿ ಹರಿಯುವಂತೆ ಮಾಡಬೇಕು. ಹಿರಿಯರ ವಿಚಾರ ವಿನಿಮಯಕ್ಕೆ, ಮನೋರಂಜನೆಗೆ ಅನೇಕ ವೇದಿಕೆಗಳಿವೆ, ಆದರೆ ನಮ್ಮ ಭವಿಷ್ಯದ ಆಸ್ತಿಯಾದ ಈ ಮಕ್ಕಳಿಗಾಗಿ ಯಾವ ಸಂಘ–ಸಂಸ್ಥೆಗಳೂ ಇಲ್ಲದಿರುವುದು ಅವರ ಹೊಸ ಆಲೋಚನೆಗೆ ನಾಂದಿಯಾಯಿತು. ಮಕ್ಕಳ ಮನೋವಿಕಾಸಕ್ಕೆ, ಅವರ ಸಾಂಸ್ಕೃತಿಕ ಚಟುವಟಿಕೆಗೆ

ಒಂದು ವೇದಿಕೆಯನ್ನು ಸ್ಥಾಪಿಸಬೇಕೆಂಬ ಬಯಕೆ ಅವರಲ್ಲಿ ಬಲವಾಗುತ್ತಾ ಹೋಯಿತು. ಹೇಗೆ ಪ್ರಾರಂಭಿಸುವುದು, ಅವುಗಳ ಉದ್ದೇಶ, ಯೋಜನೆ, ಯಾರಿಂದ ಅಗತ್ಯವಾದ ಸಹಾಯವನ್ನು ಪಡೆಯುವುದು ಎಂಬ ಪ್ರಶ್ನೆಗಳು ಅವರಿಗೆ ಉಂಟಾಗುವುದರೊಂದಿಗೆ ತಮಗೆ ತೋಚಿದ ರೀತಿಯಲ್ಲಿ ಪ್ರಾರಂಭಿಸಿಯೇ ಬಿಟ್ಟರು.

ತಮ್ಮ ಮನೆಯ ರಸ್ತೆಯಲ್ಲಿ ಆಡುತ್ತಿದ್ದ ಮಕ್ಕಳನ್ನು ಕಲೆ ಹಾಕಿ ಅವರ ಮನೋರಂಜನೆಗಾಗಿ ಕತೆ ಹೇಳುವುದು, ಆಟಪಾಟಗಳನ್ನು ಆಡಿಸುವುದನ್ನು ಪ್ರಾರಂಭಿಸಿದರು. ಕೆಲವು ಮಕ್ಕಳಿಂದ ಮಾತ್ರ ಆರಂಭವಾದ ಈ ಚಟುವಟಿಕೆ ಹೆಚ್ಚು ಹೆಚ್ಚು ಮಕ್ಕಳನ್ನು ಆಕರ್ಷಿಸುವ ಕೇಂದ್ರವಾಯಿತು. ತಮ್ಮ ಮಕ್ಕಳಲ್ಲಿರುವ ಶಕ್ತಿ ಸಾಮರ್ಥ್ಯವನ್ನು ನೋಡಿ ಪೋಷಕರು ಬೆರಗಾದರು. ಕಲ್ಯಾಣಮ್ಮನವರ ಕಾರ್ಯ ಚಟುವಟಿಕೆಗಳಿಗೆ ನೆರವಾಗಲು ಮುಂದೆ ಬಂದರು. ೧೯೩೩ರಲ್ಲಿ ಕಲ್ಯಾಣಮ್ಮನವರು ಮಕ್ಕಳ ಕೂಟವನ್ನು ಪ್ರಾರಂಭಿಸಿದರು.

ರಜೆಯ ಕಾಲದಲ್ಲಿ ಮಕ್ಕಳ ಸಮ್ಮೇಳನಗಳನ್ನು ಏರ್ಪಡಿಸುವುದು. ಮಕ್ಕಳೇ ಸಮ್ಮೇಳನದ ಜವಾಬ್ದಾರಿಯನ್ನು ವಹಿಸಿಕೊಳ್ಳುವುದು, ಮಕ್ಕಳ ಕಲ್ಯಾಣಕ್ಕೆ ಅಗತ್ಯವಾದ ನಿರ್ಣಯಗಳನ್ನು ಸರ್ಕಾರಕ್ಕೆ ಕಳಿಸಿಕೊಡುವುದು ರಾಷ್ಟ್ರೀಯ ಹಬ್ಬಗಳನ್ನು ಆಚರಿಸುವುದು ಕವನ, ಕತೆ, ಚಿತ್ರ, ಚರ್ಚಾಸ್ಪರ್ಧೆಗಳನ್ನು ಏರ್ಪಡಿಸುವುದು, ಗ್ರಂಥಭಂಡಾರವನ್ನು ತೆಗೆಯುವುದು ಮುಂತಾದ ಉದ್ದೇಶಗಳನ್ನು ಮಕ್ಕಳ ಕೂಟ ಹೊಂದಿತ್ತು. ಮಕ್ಕಳ ಈ ವೇದಿಕೆ ಬಹುಬೇಗ ಜನಪ್ರಿಯತೆಯನ್ನು ಪಡೆಯುವುದರ ಜೊತೆಗೆ ಕರ್ನಾಟಕದ ಮೂಲೆ ಮೂಲೆಗಳಲ್ಲಿ ಇವರ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಯಿತು. ಇಂದಿಗೂ ಮಕ್ಕಳಕೂಟ ತನ್ನ ಉದ್ದೇಶಕ್ಕನುಗುಣವಾಗಿ ಕಾರ್ಯ ನಿರ್ವಹಿಸುವುದು ಮೆಚ್ಚಲೇ ಬೇಕಾದ ಒಂದು ಅಂಶ

ಸರಸ್ವತಿ

ಶಾರದಾ ಸ್ತ್ರೀ ಸಮಾಜದ ಚಟುವಟಿಕೆಗಳಲ್ಲಿ ತೀವ್ರವಾಗಿ ತೊಡಗಿಸಿಕೊಂಡಿದ್ದ ಕಲ್ಯಾಣಮ್ಮನವರಿಗೆ ಸಮಾಜದ ಚಟುವಟಿಕೆಗಳನ್ನು ಬೆಳಕಿಗೆ ತರುವ ಮಾಧ್ಯಮವೊಂದರ ಅವಶ್ಯಕತೆಯು ಕಂಡು ಬಂದಿತು. ತಮ್ಮ ಆಲೋಚನೆಗಳನ್ನು, ವಿಚಾರಗಳನ್ನು ಹಂಚಿಕೊಳ್ಳಲು ಪತ್ರಿಕೆಯ ಪ್ರಕಟಣೆಯೇ ಸರಿಯಾದ ಮಾಧ್ಯಮವೆಂದು ಅವರಿಗೆನಿಸಿತು. ಅಂದು ಕನ್ನಡ ಪತ್ರಿಕೆಯ ಪ್ರಕಟಣೆಯು ವಿರಳವಾಗಿತ್ತು. ತಮ್ಮ ವಿಚಾರಗಳಿಗೆ ಮೂರ್ತ ರೂಪವನ್ನು ನೀಡುವುದು, ನಾಡಿನ ವಿವಿಧ ಮೂಲೆಯಲ್ಲಿರುವ ಸಹೃದಯರೊಂದಿಗೆ ಸಂವಾದ ನಡೆಸುವ ತಮ್ಮ ಆಸೆ ಪತ್ರಿಕೆಯ ಪ್ರಕಟಣೆಯ ಮೂಲಕ ಕೈಗೂಡುವುದೆಂಬ ಭರವಸೆಯಿಂದ, ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರು.

"ಸರಸ್ವತಿ"ಯ ಪ್ರಕಟಣೆ ಕಲ್ಯಾಣಮ್ಮನವರ ಮಹತ್ವಾಕಾಂಕ್ಷೆಯ ಪ್ರಯತ್ನವೆಂದು ಹೇಳಬೇಕು. ಪತ್ರಿಕೆಗಳು ವಿರಳವಾಗಿದ್ದ ಕಾಲದಲ್ಲಿ ಮಹಿಳೆಯೊಬ್ಬಳು ಪತ್ರಿಕೆಯ ಪ್ರಕಟಣೆಯ ಜವಾಬ್ದಾರಿಯನ್ನು ಹೊತ್ತುಕೊಂಡು ಸುಮಾರು ನಲವತ್ತಕ್ಕೂ ಹೆಚ್ಚು ಕಾಲ ಪತ್ರಿಕೆಯನ್ನು ಸತತವಾಗಿ ನಡೆಸಿದ್ದು ಒಂದು ಕೌತುಕವೆಂದೇ ಭಾವಿಸಬಹುದು.

ಸರಸ್ವತಿ ಮಹಿಳೆಯರ ಪತ್ರಿಕೆಯಾಗಿದ್ದರೂ ಹಲವಾರು ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವುದು. ಸಾಹಿತ್ಯದ ಬರಹಗಳನ್ನು ಪತ್ರಿಕೆಯಲ್ಲಿ ಪ್ರಕಟವಾದವು. ಸ್ತ್ರೀಯರ ಹಲವಾರು ಸಮಸ್ಯೆಗಳನ್ನು ಚರ್ಚಿಸುವುದರೊಂದಿಗೆ ವಿವಿಧ ಹೆಸರಾಂತ ಲೇಖಕರೂ ಪತ್ರಿಕೆಯಲ್ಲಿ ಬರೆಯ ತೊಡಗಿದರು. ಮಕ್ಕಳಿಗಾಗಿ ಒಂದು ಪ್ರತ್ಯೇಕ ವಿಭಾಗವನ್ನು ತೆಗೆಯುವುದರ ಜೊತೆಗೆ ವೈವಿಧ್ಯಮಯ ಬರವಣಿಗೆಗಳನ್ನು ಪತ್ರಿಕೆ ಒಳಗೊಂಡಿತ್ತು.

ಪತ್ರಿಕೆಯು ಪ್ರಾರಂಭವಾಗಿ ಒಂದೆರಡು ಸಂಚಿಕೆಗಳನ್ನು ಹೊರತರುವುದರಲ್ಲೇ ಹಲವಾರು ತೊಂದರೆಯಿಂದಾಗಿ ಪ್ರಕಟನೆಯು ನಿಂತು ಹೋಯಿತು. ಎಂತಹ ಸ್ಥಿತಿಯಲ್ಲೂ ಧೈರ್ಯಗುಂದದ ಕಲ್ಯಾಣಮ್ಮ ಪತ್ರಿಕೆಯನ್ನು ಪುನಃ ಆರಂಭಿಸಿದರು. ಪತ್ರಿಕೆಯ ಹಂತದಲ್ಲಿ ಉಂಟಾದ ಎಡರು, ತೊಡರುಗಳನ್ನೆಲ್ಲಾ ಎದುರಿಸಿ ಪತ್ರಿಕೆಯ ಪ್ರಕಟಣೆಯ ಕಾರ್ಯವನ್ನು ಮುಂದುವರಿಸಿದರು

— ಕವರ್ ಪೇಜ್ ಹಿಂಭಾಗದಲ್ಲಿ ಮುಂದುವರೆದಿದೆ.

# ಜಾತಿ ವ್ಯವಸ್ಥೆ ಮತ್ತು ಮಹಿಳೆ

ಡಾ|| ಬಿ. ಆರ್ ಅಂಬೇಡ್ಕರ್.

ಜಾತಿ ಸಮಸ್ಯೆಯು ಅಂತಿಮವಾಗಿ, ಮದುವೆಗೆ ಪ್ರಾಪ್ತ ವಯಸ್ಕರಾದ ಸ್ತ್ರೀ-ಪುರುಷ ವೈರುಧ್ಯಗಳನ್ನು ಸರಿಪಡಿಸುವ ಒಂದು ಅಂಶವಾಗಿ ಮಾರ್ಪಡುತ್ತದೆ. ಅದರ ಪಾಡಿಗೆ ಅದನ್ನು ಬಿಟ್ಟರೂ ಈ ಎರಡು ಘಟಕಗಳಲ್ಲಿರುವ ಅನುರೂಪತೆಯನ್ನು ಗಂಡ-ಹೆಂಡತಿ ಒಟ್ಟಿಗೆ ಸತ್ತಾಗ ಮಾತ್ರ ಕಾಣಬಹುದು. ಆದರೆ ಇದೊಂದು ಅಪರೂಪದ ಸಂಗತಿ. ಹೆಂಡತಿಗಿಂತ ಮುಂಚೆಯೇ ಗಂಡ ಸತ್ತು ಒಬ್ಬ ಹೆಚ್ಚುವರಿ ಹೆಣ್ಣನ್ನು ಉಳಿಸಿ ಹೋಗಬಹುದು. ಅಂಥ ಪ್ರಸಂಗದಲ್ಲಿ ಗಂಡ ನಿಲ್ಲದ ಆಕೆಯನ್ನು ಇತಿಶ್ರೀ ಮಾಡಬೇಕಾಗುತ್ತದೆ. ಹಾಗೆ ಮಾಡದಿದ್ದರೆ ಆಕೆ ಅಂತರ್ಜಾತೀಯ ವಿವಾಹದ ಮೂಲಕ ಆ ಗುಂಪಿನ ಸ್ವಜಾತಿ ವಿವಾಹ ಪದ್ಧತಿಯನ್ನು ಮುರಿಯುತ್ತಾಳೆ. ಇದೇ ರೀತಿಯಲ್ಲಿ ಹೆಂಡತಿ ಸತ್ತು ಗಂಡ ಉಳಿದು ಹೆಚ್ಚುವರಿ ಮನುಷ್ಯನಾಗಬಹುದು. ಆಗ ಆ ಗುಂಪು ಅವನ ಮಡದಿಯ ದಾರುಣ ಸಾವಿಗೆ ಕನಿಕರಿಸಲೂಬಹುದು. ಆದರೆ ಅವನನ್ನೂ ನಿವಾರಿಸಲೇಬೇಕು. ಇಲ್ಲವಾದರೆ ಅವನು ಗುಂಪಿನ ಹೊರಗೆ ಮದುವೆಯಾಗಿ ಸ್ವಜಾತಿ ವಿವಾಹ ನಿಯಮವನ್ನು ನುಚ್ಚುಗೊಳಿಸುತ್ತಾನೆ. ಹೀಗೆ ಹೆಚ್ಚುವರಿಯಾದ ಹೆಣ್ಣು ಮತ್ತು ಗಂಡು ಜಾತಿಗೆ ಕಂಟಕವಾಗುತ್ತಾರೆ, ಹಾಗಾಗದಂತೆ ನೋಡಿಕೊಳ್ಳಬೇಕು ಆ ಗುಂಪಿನ ನಿಗದಿತ ವಲಯದೊಳಗೇ ಸರಿಯಾದ ಸಂಗಾತಿಗಳನ್ನು ತ್ತಾರೆ. ಹುಡುಕದಿದ್ದರೆ (ಅವರ ಪಾಡಿಗೆ ಅವರನ್ನು ಬಿಟ್ಟಲ್ಲಿ ಅವರು ಯಾರನ್ನೂ ಹುಡುಕಲಾರರು, ಮತ್ತು ಇದನ್ನು ನಿಯಂತ್ರಿಸದಿದ್ದಲ್ಲಿ ಸುಮ್ಮನೆ ಟಳಾಯಿಸುವ ಜೋಡಿಗಳು ಇದ್ದಾವು) ಅವರು ಎಲ್ಲೆ ಮೀರುವ ಹೊರಗಡೆ ಮದುವೆಯಾಗುವ, ಮತ್ತು ಜಾತಿಗೆ ಹೊರತಾಗಿ ಸಂತಾನ ಕೊಡುವ ಸಂಭವವಿದೆ.

ಮೇಲೆ ಹೇಳಿದ ಹೆಚ್ಚುವರಿ ಗಂಡು ಮತ್ತು ಹೆಚ್ಚುವರಿ ಹೆಣ್ಣು ಕುರಿತು ನಮ್ಮ ಕಾಲ್ಪನಿಕ ಗುಂಪು ಏನು ಮಾಡಬಹುದೆಂಬುದನ್ನೀಗ ನೋಡೋಣ. ಮೊದಲು ಹೆಚ್ಚುವರಿ ಹೆಣ್ಣಿನ ವಿಚಾರ ಪರಿಶೀಲಿಸೋಣ ಜಾತಿಯ ಸ್ವಗೋತ್ರ ವಿವಾಹ ಪದ್ಧತಿಯನ್ನು ಕಾಪಾಡುವ ಸಲುವಾಗಿ ಎರಡು ರೀತಿಯಲ್ಲಿ ಆಕೆಯ ವಿಷಯನ್ನು ಇತ್ಯರ್ಥ ಮಾಡಬಹುದಾಗಿದೆ.

ಪ್ರಥಮ:- ಅವಳ ಮೃತ ಗಂಡನ ಚಿತೆಯಲ್ಲೇ ಅವಳನ್ನು ಸುಟ್ಟು ಅವಳ ಕಥೆ ಮುಗಿಸಬಹುದು. ಆದರೆ ಲೈಂಗಿಕ ಅಸಮಾನತೆಯ ಸಮಸ್ಯೆಯನ್ನು ನಿವಾರಿಸುವಲ್ಲಿ ಇದೊಂದು ಅಪ್ರಾಯೋಗಿಕ ವಿಧಾನವಾದೀತು. ಕೆಲವು ಕಡೆಗಳಲ್ಲಿ ಇದು ಸರಿ ಹೋಗಬಹುದು. ಅದರಿಂದಾಗಿ ಪ್ರತಿಯೊಬ್ಬ ಹೆಚ್ಚುವರಿ ಸ್ತ್ರೀಯನ್ನೂ ಹೀಗೆ ನಿವಾರಿಸಲಾಗದು. ಇದು ಸುಲಭ ಪರಿಹಾರವಾದರೂ ಕಷ್ಟ ಸಾಧ್ಯವಾಗಿದೆ. ಈ ರೀತಿಯಲ್ಲಿ ಹೆಚ್ಚುವರಿ ಸ್ತ್ರೀ (ವಿಧವೆ) ಯನ್ನು ನಿವಾರಿಸದಿದ್ದಲ್ಲಿ ಗುಂಪಿನಲ್ಲೇ ಉಳಿಯುತ್ತಾಳೆ, ಆದರೆ ಅವಳ ಇರುವಿಕೆಯಲ್ಲೇ ಎರಡು ಅಪಾಯಗಳಿವೆ. ಆಕೆ ಜಾತಿಯ ಹೊರಗೆ ಮದುವೆಯಾಗಿ ಸ್ವಜಾತಿ ಪದ್ಧತಿಯನ್ನು ಉಲ್ಲಂಘಿಸಬಹುದು, ಇಲ್ಲವೆ ಆಕೆ ಜಾತಿಯೊಳಗೇ ಮದುವೆಯಾಗಲೂಬಹುದು ಮತ್ತು ಅದರಿಂದ ಜಾತಿಯೊಳಗೆ ಸಮರ್ಥ ವಧುಗಳಿಗೆ ಮೀಸಲಿದ್ದ ವಿವಾಹದ ಅವಕಾಶಗಳಿಗೆ ಲಗ್ಗೆ ಹಾಕಬಹುದು. ಆದ್ದರಿಂದ, ಯಾವುದೇ ರೀತಿಯಲ್ಲಿ ಆಕೆಯೊಂದು ಪಿಡುಗು, ಆಕೆಯು ಸತ್ತ ಗಂಡನೊಂದಿಗೆ ಆಕೆಯನ್ನೂ ದಹಿಸಲಾಗದಿದ್ದರೂ ಯಾವುದಾದರೊಂದನ್ನು ಮಾಡಲೇಬೇಕು.

ಎರಡನೆಯ ಪರಿಹಾರೋಪಾಯವೆಂದರೆ ಅವಳಿಗೆ ಉಳಿದ ಜೀವನ ಪರ್ಯಂತ ವೈಧವ್ಯವನ್ನು ವಿಧಿಸುವುದು ವಸ್ತುನಿಷ್ಠ ಪರಿಣಾಮದ ದೃಷ್ಟಿಯಿಂದಲಂತೂ ವೈಧವ್ಯವನ್ನು ಹೇರುವುದಕ್ಕಿಂತಲೂ ಸುಡುವುದೇ ಉತ್ತಮ ಪರಿಹಾರ, ವಿಧವೆಯನ್ನು ಸುಡುವುದರಿಂದ ಒಬ್ಬ ಹೆಚ್ಚುವರಿ ಹೆಣ್ಣಿಗೆ ಸಂಭವಿಸಬಹುದಾದ ಎಲ್ಲ ಮೂರು

ಕೇಡುಗಳನ್ನು ನಿವಾರಿಸಿದಂತೆ ಆಗುತ್ತದೆ. ಸತ್ತು ಇಲ್ಲವಾಗುವುದರ ಮೂಲಕ ಆಕೆ ಜಾತಿಯ ಒಳಗಾಗಲಿ ಹೊರಗಾಗಲಿ ಮದುವೆಯಾಗುವ ಸಮಸ್ಯೆಯಿರುವುದಿಲ್ಲ. ಆದರೆ ಹೀಗೆ ಸುಡುವುದಕ್ಕಿಂತಲೂ ಕಡ್ಡಾಯ ವೈಧವ್ಯ ಉತ್ತಮವೇಕೆಂದರೆ ಅದು ಹೆಚ್ಚು ಪ್ರಾಯೋಗಿಕವಾಗಿದೆ. ಕಾಲನಿಕವಾಗಿಯೂ ಇದು ಮಾನವೀಯವಾಗಿರುವುದಲ್ಲದೆ, ದಹನದಂತೆ ಇದು ಪುನರ್ವಿವಾಹದ ಕೇಡಿನಿಂದ ಕಾಪಾಡುತ್ತದೆ. ಆದರೆ ಗುಂಪಿನ ನೈತಿಕತೆಯನ್ನು ರಕ್ಷಿಸುವಲ್ಲಿ ಇದು ಸೋಲುತ್ತದೆ. ಕಡ್ಡಾಯ ವೈಧವ್ಯದಲ್ಲಿ ಸ್ತ್ರೀ ಇರುತ್ತಾಳೆಂಬುದರಲ್ಲಿ ಸಂಶಯವಿಲ್ಲ. ವಿಧಿಬದ್ಧ ಪತ್ನಿಗಿರುವ ಸಹಜ ಹಕ್ಕುಗಳಿಂದ ಆಕೆಯ ಭವಿಷ್ಯ ಜೀವನದಲ್ಲಿ ಪದಚ್ಯುತಗೊಳಿಸುವುದರಿಂದಾಗಿ ಅನೈತಿಕ ನಡತೆಗೆ ಆಕರ್ಷಣೆ ಹೆಚ್ಚಾಗುತ್ತದೆ. ಆದರೆ ಇದು ಯಾವುದೇ ರೀತಿಯಲ್ಲೂ ಒಂದು ದುಸ್ತರವಾದ ಕಷ್ಟವಲ್ಲ. ಇನ್ನು ಮರುಳು ಮಾಡುವ ಸತಿಯಾಗದ ಒಂದು ಪರಿಸ್ಥಿತಿಯಲ್ಲಿರುವಂತೆ ಆಕೆಯನ್ನು ಕೆಳದರ್ಜೆಗೆ ಇಳಿಸಬಹುದು. ತನ್ನನ್ನು ಒಂದು ಜಾತಿಗೊಳಪಡಿಸಲು ಇಚ್ಛಿಸುವ ಗುಂಪಿನಲ್ಲಿ, ಹೆಚ್ಚುವರಿ ಹೆಣ್ಣಿನದಕ್ಕಿಂತ ಹೆಚ್ಚುವರಿ ಗಂಡಸಿನ (ವಿಧುರನ) ಸಮಸ್ಯೆ ಇನ್ನೂ ಪ್ರಮುಖತರ ಮತ್ತು ಸಮಸ್ಯಾತ್ಮಕವಾಗಿದೆ. ಅನಾದಿಕಾಲದಿಂದಲೂ ಹೆಣ್ಣಿಗೆ ಹೋಲಿಸಿದಾಗ ಗಂಡು ಮೇಲುಗೈ ಪಡೆದಿದ್ದಾನೆ. ಎಲ್ಲ ಗುಂಪಿನಲ್ಲೂ ಆತ ಪ್ರಧಾನ ವ್ಯಕ್ತಿ. ಎರಡು ಲಿಂಗಗಳಲ್ಲಿ ಆತನಿಗೇ ಅಧಿಕವಾದ ಪ್ರತಿಷ್ಠೆಯಿದೆ. ಸ್ತ್ರೀಯ ಮೇಲಿನ ಅವನ ಈ ಸಂಪ್ರದಾಯಿಕವಾದ ಶ್ರೇಷ್ಠತೆಯಿಂದಾಗಿ ಆತನ ಅಪೇಕ್ಷೆಗಳನ್ನು ಯಾವಾಗಲೂ ಪರಿಶೀಲಿಸಲಾಗುತ್ತಿದೆ. ಇನ್ನೊಂದು ಕಡೆ ಧಾರ್ಮಿಕ, ಸಾಮಾಜಿಕ ಅಥವಾ ಆರ್ಥಿಕ ಎಲ್ಲ ಬಗೆಯ ಪಕ್ಷಪಾತ ಕಟ್ಟಳೆಗಳಿಗೂ ಸ್ತ್ರೀಯು ಸುಲಭವಾಗಿ ಬಲಿಯಾಗುತ್ತಿದ್ದಾಳೆ. ಆದರೆ ಗಂಡಸು ಕಟ್ಟಳೆಗಳನ್ನು ಮಾಡುವ ವ್ಯಕ್ತಿಯಾಗಿ ಅನೇಕ ಬಾರಿ ಅವುಗಳಿಗೆ ಅತೀತನಾಗಿ ಪರಿಸ್ಥಿತಿ ಹೀಗಿರುವುದರಿಂದಾಗಿ, ಒಂದು ಜಾತಿಯಲ್ಲಿ ಹೆಚ್ಚುವರಿ ಹೆಣ್ಣಿಗೆ ನೀವು ತೋರುವಂತಹ ವರ್ತನೆಯನ್ನು ಗಂಡಿಗೂ ತೋರಲಾರಿರಿ.

ಆತನನ್ನು ಸತ್ತ ಆತನ ಹೆಂಡತಿಯೊಂದಿಗೆ ಸುಡುವುದು ಎರಡು ರೀತಿಗಳಲ್ಲಿ ಕಷ್ಟ ಸಾಧ್ಯವಾಗುವುದು. ಎಲ್ಲಕ್ಕಿಂತಲೂ ಮೊದಲನೆಯದೆಂದರೆ ಆತ ಗಂಡಸು ಎಂಬೊಂದೇ ಸರಳ ಕಾರಣಕ್ಕಾಗಿ, ಆತನನ್ನು ಚಿತೆಯೇರಿಸಲು ಸಾಧ್ಯವಾಗುವುದಿಲ್ಲ. ಎರಡನೆಯದಾಗಿ ಹಾಗೆ ಮಾಡಿದರೂ, ಆ ಜಾತಿಗೆ ಒಬ್ಬ ಬಲಿಷ್ಠ ವ್ಯಕ್ತಿ ನಷ್ಟವಾಗುತ್ತಾನೆ. ಆದ್ದರಿಂದ ಅವನನ್ನು ಪ್ರಶಸ್ತವಾಗಿಯೇ ನಿವಾರಿಸಿಕೊಳ್ಳಲು ಇನ್ನೆರಡು ಪರಿಹಾರಗಳುಳಿಯುತ್ತವೆ. ಪ್ರಶಸ್ತವಾಗಿಯೇ ಎಂದು ನಾನು ಹೇಳುತ್ತಿರುವುದು ಏಕೆಂದರೆ ಆತ ಗುಂಪಿಗೊಂದು ಆಸ್ತಿ.

ಆತ ಗುಂಪಿಗೆ ಮುಖ್ಯನಾದುದರಿಂದಲೂ, ಸ್ವಜಾತಿ ಪದ್ಧತಿ ಇನ್ನೂ ಮುಖ್ಯವಾಗಿರುವುದರಿಂದಲೂ ಇದರ ಪರಿಹಾರ ಈ ಎರಡು ಗುರಿಗಳಿಗೂ ಸಲ್ಲುವಂತಿರಬೇಕು. ಇಂಥ ಪರಿಸ್ಥಿತಿಗಳಲ್ಲಿ ವಿಧವೆಗೆ ಇರುವ ರೀತಿಯಲ್ಲಿ, ಆಜೀವಪರ್ಯಂತವೂ ವಿಧುರನಾಗಿರುವಂತೆ ಆತನನ್ನು ಬಲಾತ್ಕರಿಸಬಹುದು. ಅಥವಾ ಪ್ರೇರೇಪಿಸಲೂಬಹುದೆಂದು ನಾನು ಹೇಳುತ್ತೇನೆ. ಒಟ್ಟಾರೆ ಈ ಪರಿಹಾರ ಅಷ್ಟೇನೂ ಕಷ್ಟವಲ್ಲ. ಏಕೆಂದರೆ ಯಾವುದೇ ಒತ್ತಾಯಗಳಿಲ್ಲದೆಯೂ ಕೆಲವರು ಸ್ವಇಚ್ಛೆಯಿಂದಲೇ ಬ್ರಹ್ಮಚರ್ಯವನ್ನು ಅನುಮೋದಿಸಬಲ್ಲರು. ಅಥವಾ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಅವರು ತಾವಾಗಿಯೇ, ಜಗತ್ತನ್ನೂ, ಅದರ ಸಂತೋಷವನ್ನೂ ತ್ಯಜಿಸಬಲ್ಲರು. ಆದರೆ ಮನುಷ್ಯ ಸ್ವಭಾವದಿಂದಾಗಿ ಈ ಪರಿಹಾರವನ್ನು ನಿರೀಕ್ಷಿಸುವುದು ದುರ್ಲಭವೇ ಸರಿ. ಇನ್ನೊಂದು ರೀತಿಯಲ್ಲಿ ಸಾಮಾನ್ಯವಾಗಿ ಆಗುವಂತೆ ಹೆಚ್ಚುವರಿ ಮನುಷ್ಯ ಗುಂಪಿನಲ್ಲೇ ಉಳಿದು ಸಾಮೂಹಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವುದಾದರೆ, ಆತ ಗುಂಪಿನ ನೀತಿಗಳಿಗೆ ಅಪಾಯವಾಗುತ್ತಾನೆ. ಭಿನ್ನದೃಷ್ಟಿ ಕೋನದಿಂದ ನೋಡಿದ್ದಾದರೆ, ಬ್ರಹ್ಮಚರ್ಯ ಅದು ಯಶಸ್ವಿಯಾಗುವೆಡೆಗಳಲ್ಲಿ ಸುಲಭವೇ ಆದರೂ ಜಾತಿಯ ಭೌತಿಕ ಭವಿಷ್ಯಕ್ಕೆ ಅದು ಅನುಕೂಲಕರವಾದುದಲ್ಲ. ಆತ ನಿಷ್ಠುರ ಬ್ರಹ್ಮಚರ್ಯವನ್ನು ಪಾಲಿಸಿ ಪ್ರಪಂಚವನ್ನು ತ್ಯಜಿಸಿದಲ್ಲಿ ಜಾತಿ ಪದ್ಧತಿ ಅಥವಾ ಜಾತಿಗಳ ನೀತಿಗಳ ಸಂರಕ್ಷಣೆಗೆ ಅಡ್ಡಿಯಾಗಲಾರ. ಒಂದು ವೇಳೆ ಆತ ಜಾತ್ಯಾತೀತ ವ್ಯಕ್ತಿಯಾಗಿ ಉಳಿದದ್ದೇ ಆದರೆ ಆಗ ಆತ ಒಂದು ಪಿಡುಗಾಗುತ್ತಾನೆ. ಆದರೆ ತನ್ನ ಜಾತಿಯ ಲೌಕಿಕ ಸಂರಕ್ಷಣೆಯ ದೃಷ್ಟಿಯಿಂದ ಯತಿಯು ನೈಷ್ಠಿಕ ಬ್ರಹ್ಮಚಾರಿಯಾಗಿ ಆತ ಹೆಚ್ಚು ಕಡಿಮೆ ಸುಟ್ಟ

ವ್ಯಕ್ತಿಯೇ. ಒಂದು ಜಾತಿ, ಕಠಿಣವಾದ ಸಮುದಾಯ ವ್ಯವಸ್ಥೆ ಸಾಧ್ಯವಾಗುವಂತೆ ದೊಡ್ಡದಾಗಿದ್ದು ಅದು ಒಂದು ಸಂಖ್ಯಾ ಬಲವನ್ನೂ ಉಳಿಸಿಕೊಂಡಿರಬೇಕಾಗುತ್ತದೆ. ಆದರೆ ಈ ಸಂಖ್ಯಾ ಬಲವನ್ನು ನಿರೀಕ್ಷಿಸುತ್ತ ಬ್ರಹ್ಮಚರ್ಯವನ್ನು ಸಾರುವುದು, ಕ್ಷಯರೋಗವನ್ನು ರಕ್ತಸ್ರಾವದಿಂದ ಗುಣ ಪಡಿಸಿದಂತಾಗುತ್ತದೆ.

ಆದ್ದರಿಂದ ಒಂದು ಗುಂಪಿನಲ್ಲಿ ಹೆಚ್ಚುವರಿ ಗಂಡಸಿನ ಮೇಲೆ ಬ್ರಹ್ಮಚರ್ಯವನ್ನು ಹೇರುವಿಕೆ, ತಾತ್ವಿಕವಾಗಿಯೂ ಪ್ರಾಯೋಗಿಕವಾಗಿಯೂ ವಿಫಲಗೊಳ್ಳುತ್ತದೆ. ಒಂದು ಸಂಸ್ಕೃತ ಪಾರಿಭಾಷಿಕ ಶಬ್ದವನ್ನು ಬಳಸಿ ಹೇಳುವುದಾದರೆ, ಅವನನ್ನು ಒಬ್ಬ ಗೃಹಸ್ಥ (ಒಂದು ಕುಟುಂಬ ಪಾಲಕ) ನನ್ನಾಗಿ ಇಡುವುದು ಜಾತಿಯ ಹಿತದೃಷ್ಟಿಯಿಂದಲೇ ಆದರೆ ಜಾತಿಯೊಳಗೇ ಒಬ್ಬ ಹೆಂಡತಿಯನ್ನು ಅವನಿಗೆ ಒದಗಿಸುವುದೇ ಸಮಸ್ಯೆಯಾಗಿದೆ. ಹೊರ ನೋಟಕ್ಕೆ ಇದು ಅಸಾಧ್ಯ. ಏಕೆಂದರೆ ಒಂದು ಜಾತಿಯಲ್ಲಿರಬೇಕಾದ ಪ್ರಮಾಣವೆಂದರೆ ಒಂದು ಗಂಡಿಗೆ ಒಂದು ಹೆಣ್ಣು. ಎರಡು ಬಾರಿ ಮದುವೆ ಆಗುವ ಅವಕಾಶವನ್ನು ಯಾರೂ ಹೊಂದಲಾಗದು. ಬಿಗಿಯಾಗಿ ತಾನೇ ಬೇಲಿ ಹಾಕಿರುವ ಒಂದು ಜಾತಿಯೊಳಗೆ ಮದುವಣಿಗರ ಬಳಿಗೆ ಹೋಗುವ ಮದುವಣಗಿತ್ತಿಯರು ಯಾವಾಗಲೂ ತಕ್ಕಷ್ಟೇ ಇರುತ್ತಾರೆ. ಇಂಥ ಸಂದರ್ಭಗಳಲ್ಲಿ ಹೆಚ್ಚುವರಿ ಗಂಡಸಿಗೆ, ಆತನನ್ನು ಒಂದು ಗುಂಪಿಗೇ ಕಟ್ಟಿ ಹಾಕುವ ಸಲುವಾಗಿ, ಮದುವೆಯಾಗ ಬಲ್ಲ ಹಂತವನ್ನು ಇನ್ನೂ ತಲುಪಿರದ ವಧುವನ್ನು ಹೆಂಡತಿಯಾಗಿ ತುಂಬಿಸಬಹುದು. ಹೆಚ್ಚುವರಿ ಗಂಡಸಿನ ವಿಚಾರದಲ್ಲಿ ನಿಶ್ಚಯವಾಗಿಯೂ ಇದು ಅತ್ಯುತ್ತಮವಾದ ಸಾಧ್ಯ ಪರಿಹಾರ. ಇದರಿಂದ ಆತನನ್ನು ಜಾತಿಯಲ್ಲೇ ಉಳಿಸಿದಂತಾಗುತ್ತದೆ. ಜಾತಿಯಿಂದ ನಿರಂತರವಾಗಿ ಹೊರಗೆ ಹರಿಯುವ ಸಂಖ್ಯಾಬಲವನ್ನು ಈ ವಿಧಾನದಿಂದ ಸಂರಕ್ಷಿಸಿದಂತಾಗುವುದಲ್ಲದೆ ಸ್ವಜಾತಿ ಪದ್ಧತಿ ಮತ್ತು ನೀತಿಗಳನ್ನು ಕಾಪಾಡಿದಂತಾಗುತ್ತದೆ.

ಸ್ತ್ರೀ ಪುರುಷರ ನಡುವೆ ಇರುವ ಸಂಖ್ಯಾತ ತಾರತಮ್ಯವನ್ನು ನಾಲ್ಕು ರೀತಿಗಳಿಂದ ಹೇಗೆ ಅನುಕೂಲಕರವಾಗಿ ಪಾಲಿಸಲಾಗುತ್ತದೆಂಬುದನ್ನು ಈಗ ನೋಡಬಹುದು.

೧) ತನ್ನ ಸತ್ತ ಗಂಡನೊಂದಿಗೆ ವಿಧವೆಯನ್ನು ಸುಡುವುದು

೨) ಕಡ್ಡಾಯ ವೈಧವ್ಯ ಸತಿ ಪದ್ಧತಿಗಿಂತ ಸೌಮ್ಯರೂಪ

೩) ವಿಧುರನ ಮೇಲೆ ಬ್ರಹ್ಮಚರ್ಯವನ್ನು ಹೇರುವುದು

೪) ಅಪ್ರಾಪ್ತ ವಯಸ್ಕಳೊಂದಿಗೆ ಅವನ ವಿವಾಹ. ನಾನು ಮೇಲೆ ಹೇಳಿದಂತೆ ವಿಧವೆಯನ್ನು ಸುಡುವುದು ಮತ್ತು ವಿಧುರನಿಗೆ ಬ್ರಹ್ಮಚರ್ಯ ಹೇರುವುದು, ಇವು ಗುಂಪಿನ ಸ್ವಜಾತಿ ಪದ್ಧತಿ ಪರಿಪಾಲನೆಗೆ ನೆರವಾಗುತ್ತವೆಂಬುದು ಸಂದೇಹ. ಇವೆಲ್ಲಾ ಸಾಧನೆಗಳಾದಿ ಆಚರಣೆಯಲ್ಲಿವೆ. ಆದರೆ ಸಾಧನೆಗಳು ಬಿಡುಗಡೆಗೊಂಡಾಗ ಸಾಧನೆಗಳು ಸೃಷ್ಟಿಸುವ ಗುರಿಯಾದರೂ ಯಾವುದು? ಅವು ಸ್ವಜಾತಿ ಪದ್ಧತಿಯನ್ನು ಸೃಷ್ಟಿಸುತ್ತವೆ ಮತ್ತು ಮುಂದುವರಿಸುತ್ತವೆ. ಜಾತಿ ಕುರಿತು ವಿವಿಧ ವ್ಯಾಖ್ಯೆಗಳಿಗೆ ಮಾಡಿದ ನಮ್ಮ ವಿಶ್ಲೇಷಣೆಯಂತೆ ಜಾತಿ ಮತ್ತು ಸ್ವಜಾತಿ ಪದ್ಧತಿ ವಿಭಿನ್ನವಾಗಿದೆ, ಈ ರೀತಿಯಾಗಿ ಈ ಸಾಧನೆಗಳ ಅಸ್ತಿತ್ವವು ಜಾತಿಗೆ ತದ್ರೂಪವಾಗಿದೆ. ಮತ್ತ ಜಾತಿಯೂ ಈ ಸಾಧನೆಗಳನ್ನು ಒಳಗೊಂಡಿದೆ,



# " ಚೆದುರಂಗದ ರಂಗೋಲಿ "

ಅರೆ ಬರೆ ನಿದ್ದೆ
ಎಲ್ಲೋ ತೇಲಿ ಹೋದಂತೆ
ಮಬ್ಬು ಮುಸುಕಲ್ಲಿ
ಯಾರೋ ಬೆಳದಿಂಗಳ ಸೀರೆ ಉಟ್ಟಂತೆ
ಕಾಣದೇನೂ ಮಂಜು ಕಣ್ಣಿಗೆ
ಗಮ್ಮೆಂತು ವಾಸನೆ!
ಹುಂ! ಅವಳೇ
ಮೆಲ್ಲನು ಸುರಿದೆ ' ಅವ್ವ '
ತಂಪಾಗಿ ನಕ್ಕಳು

ಬಾಗಿಲಿಗೆ ನೀರಾಕೊ ಹೊತ್ತು
ರಂಗೋಲೆ ಇಡೆ
ಇಗೋ ತಂದೆ
ನೀರು ಚಿಮುಕಿಸಿದೆ
ನೀ ಎಳೆಯುತ್ತಿದ್ದ
ರಂಗೋಲೆಯೆಲ್ಲಾ ನೆನಪಿಡೆ
ಎಳೆದರೆ ನೀ ಬೇಸೆನ್ನ ಬೇಕು

ಸರಸರ ಚುಕ್ಕೆ ಇಟ್ಟೆ
ಸುತ್ತಹೋದರೆ
ಎಳೆಯೋ ಬರದು
ನನ್ನ ಅಹಂಕಾರಕ್ಕಿಷ್ಟು
ನೀನೇ ಹೇಳೇ
ಮರೆತು ಹೋಯ್ತು

ನಕ್ಕಳೊಮ್ಮೆ
ಅಯ್ಯೋ ಕಂದಾ
ಎಳೆಗಳಷ್ಟು ಸುಲಭವಲ್ಲ
ಬಲೆ ಗೋಜಲು
ಸುತ್ತುತ್ತಿದ್ದರೆ ಎಲ್ಲೋ ಎಳೆದೊಯ್ಯುತ್ತವೆ
ಯಾರ್ಯಾರೊ ಎಳೆಸುತ್ತಾರೆ
ಎಳೆದೆಳೆದು ದಣಿಸುತ್ತಾರೆ
ಎಳೆಯೊಳಗೆ ಸಿಗಿಸುತ್ತಾರೆ
ಸುಸ್ತಾದೊ- ಜೋಕೆ!
ನೀನೆ ಎಳೆಯಾಗಿ ಬಿಡುತ್ತಿ

ಎದೆಯೊಳಗಿನ ಕಾವು ಉಳಿಸಿಕೊ
ಬದುಕೇ ಗೋಜಲ ರಂಗೋಲೆ
'ಟ' ಇನ್ನು ಮುಗಿದಿಲ್ಲ ಆಗಲೆ ಸುಸ್ತಾದೆ
ಮೆಲ್ಲನೇಳು
ಇದು ಚದುರಂಗದ ರಂಗೋಲೆ
ನೋಡಲಷ್ಟೇ
ಶುದ್ಧ ಕಪ್ಪು, ಬಿಳುಪಿನ ಚೌಕ
ಕಪ್ಪು ಕಪ್ಪಲ್ಲ
ಬಿಳಿ ಬಿಳಿಯಲ್ಲ
ಬಿಳಿಯಲ್ಲಿ ಮಸಿ
ಮಸಿಯಲ್ಲಿ ಬಿಳುಪುಂಟು
ಚೌಕ–ಬರಿ ಚೌಕವಲ್ಲ
ಕೋಟೆ, ಕೊತ್ತಲ
ಬಿಳಿಯೊಳಗೆ ಹುಳುಗಳ
ಕಪ್ಪಲ್ಲಿ ವಿಶಗಾಳಿ

ಮೆಲ್ಲನೇಳು ಮಗಾ
ಎಚ್ಚರಧಿ ಹೆಜ್ಜೆ ಇಡು
ಒಡಲಿಗೆ ತಿಳಿಯ
ಮನದ ತಕ್ಕಡಿಯ ತೂಗು
ತಿಳಿಯಿತೇ!
ನಡುಗಬೇಡ
ಈಗ ಎಳಿ

ಇಲ್ಲ,
ಹಿಡಿ ಕೈ ಭದ್ರವಾಗಿ
ನನ್ನೊಳಗಿರು ನೀನು
ಎಳೆಯುವೆ

ಸರಬರ ಪೊರಕೆ ಸದ್ದು
ಹಾಳು ಕೆಲಸದವಳು
ಎಳಿ ಶುರುವಾಗುವ ಮೊದಲೆ
ತೇಲಿ ಹೋದಳು
ಬರಿ ಚುಕ್ಕಿಗಳು
ಎಳೆಯೊಳಗೆ ಬಂಧಿಸದೆ
ಕೈ ಚೆಲ್ಲಿ ಕುಳಿತೆ
ಅವಳ ವಾಸನೆ ಕಾಯುತ್ತಾ

ಸರಸ್ವತಿ. ಡು.

# “ಕಥೆ ಹೇಳುವೆ ನನ್ನ ಕಥೆ…. ….”

“ಜಲತಾ ಹೈ ದಿಲ್ ತೊ, ಜಲನೆ ದೊ,
ಆಗ್ ಕಿಸೀಕೊ ನ ದಿಖೆ.
ದಿಖೆ ತೊ ದಿಖೆ ಪರ್ ಕ್ಯಾಕೊಯಿ,
ಇಸ್ ಕೊ ಬುಝಾ ಸಕೆ?”

“ಯಾಕೆ ಸುಮ್ನಾಗಿ ಬಿಟ್ಟೆ ಸಾಬಿಯಾ, ಮಾತಾಡು” “ಏನು ಮಾತಾಡ್ಲಿ ಮೇಡಂ! ನಂಗೆ ಸಿಹಿ ಸಿಹಿ ಮಾತಾಡೊದಿಕ್ಕೆ ಬರೊದಿಲ್ಲ”

“ಸಾಬಿಯಾ ನನ್ನ ವಿದ್ಯಾರ್ಥಿನಿ. ದಿನಾ ನಾವಿಬ್ಬರು ಒಂದೇ ಬಸ್ಸಿನಲ್ಲಿ ಓಡಾಡುವುದರಿಂದಲೊ, ಅವಳ ನಿರ್ಮಲ ಮುಗ್ಧನೋಡಿಯೋ ನಾನಿಲ್ಲಿಗೆ ಬಂದ ಕೆಲವು ದಿನಗಳಲ್ಲೆ ಅವಳು ನನ್ನ ನೆಚ್ಚಿನ ವಿದ್ಯಾರ್ಥಿನಿಯಾಗಿದ್ದಳು. ಸಾಬಿಯಾ! ಆ ಹೆಸರೇ ನಿಗೂಢ. ಆ ಹೆಸರಿನ ಅವಳು ಇನ್ನೂ ನಿಗೂಢ ನಾನೇನೇ ಮಾಡಿದರೂ ನಕ್ಕು, ಮಾತನ್ನು ತೇಲಿಸುತ್ತಿದ್ದಳು. ನಗುತ್ತಿರುತ್ತಾಳೆ ಸದಾ ನಗುತ್ತಾಳೆ “ಸಂತೃಪ್ತ ಮಕರಂದದ ಸೌಂದರ್ಯ ಕುಸುಮ” ದಂತೆ, ಆದರೆ ಆ ನಗು ಅವಳ ಮನಸ್ಸಿನಿಂದ ಹೊರಟುದುದಲ್ಲ, “ನೋವನ್ನು ಮುಚ್ಚಲು ನಗುವಿನ ಪರಧೆ” ಎಂದು ಅದೆಷ್ಟು ಸಲ ಅನಿಸಿತ್ತು. ಅದನ್ನು ಹೊರ ಹಾಕಿಸಲು ಇದಕ್ಕಿಂತ ಒಳ್ಳೆಯ ಸಮಯ ಬೇಕೆ? ಯಾರೋ ರಾಜಕೀಯ ವ್ಯಕ್ತಿಯ ಮರಣ”ದಿಂದಾಗ ಕಾಲೇಜಿಗೆ ರಜವೆಂದು ಮೆಟ್ಟಲೇರುವಾಗ ತಿಳಿದು ಇಬ್ಬರು ಅಲ್ಲಿಂದಲೇ ಹಿಂದಿರುಗಿದೆವು. ಇನ್ನೊಂದು ಬಸ್ಸು ಕಾಯುವಷ್ಟರಲ್ಲಿ ಸುಸ್ತಾಗಿ, “ಹೋಗಲಿ ಕಾಫಿಯಾದರೂ ಕುಡಿದು ಬರೋಣ ಬಾ” ಎಂದು ಅವಳನ್ನ ಕರೆದೊಯ್ದೆ. ಮಾತು ಮಾತಿನಲ್ಲೇ ಅವಳ ಮನಸ್ಸನ್ನು ಕೆದಕಿದಾಗ ಸಿಕ್ಕ ಉತ್ತರವಿದು.

ಕೆಲವು ದಿನಗಳಿಂದ ನೋಡ್ತಾ ಇದಿನಿ ನೀನೇನೋ ಚಿಂತೆಯಲ್ಲಿರೊ ಹಾಗಿರ್ತಿಯಾ ಸಾಬಿ, ವಿಷ್ಯ ಏನೂಂತ ನನ್ಹತ್ರನು ಹೇಳೊದಿಲ್ವ. ನಂಗೊತ್ತು ನೀನು ಸ್ವಾಭಿಮಾನಿ, ಸೂಕ್ಷ್ಮಮತಿ ಅಂತ ಹಾಂ! ಹೆಣ್ಣಿಗೆ ತಾಳ್ಮೆ ಇರಬೇಕು. ಆದ್ರೆ ಎಲ್ಲಿವರೆಗೆ ಸಾಬಿ! ನೀನು ಹೀಗೆ ಜ್ವಾಲಾಮುಖಿ ತರ ಉರಿತಾ ಇದ್ರೆ ಅದು ನಿನ್ನೇ ಸುಡುತ್ತೆ ಹೊರ್ತು, ಬೇರೆಯಾರಿಗೇನು?”

ಸಾಬಿಯಾ ಕ್ಷಣ ಹೊತ್ತು ಮೌನವಾಗಿದ್ದಳು. “ನನ್ನ ನೋವು ನನ್ನ ಪಾಲಿಗೆ ಇರ್ಲಿ ಮೇಡಂ. ಅದನ್ಯಾಕೆ ಸುಮ್ನೆ ಕೆದಕ್ತಿರಾ. ನನ್ನ ಹೆಸ್ರಲ್ಲಿ ಎಷ್ಟೆ ನೋವುಗಳಿದ್ರೂ ಅವನ್ನೆಲ್ಲ ಮರೆತು ನಾನು ಸಂತೋಷದಲ್ಲಿದಿನಿ. ಇಲ್ಲಿ ನಿನ್ನ ನೋವನ್ನ ಕೂಡ ತೆರೆದು ತೋರ್ಸು ಅಂದ್ರೆ ಲಕ್ಷಣ ತೋರಿಕೆಯ ನಾನಾ ಗಿರ್ದೆ. ನಾನು ನಾನಾಗಿತ್ನಿ.

“ಮೇಡಂ ನಾನು ಸಾಬಿಯಾ, ಮುಸ್ಲಿಂ ಸಂಪ್ರದಾಯಸ್ಥ ಕುಟುಂಬದ ನಿರ್ಲಕ್ಷಿತ ಹುಡ್ಗಿ ಅಂದ್ರು ಸರಿ ತುಂಬಿದ ಮನೆಯ ಒಂಟಿ ಹುಡ್ಗಿ ಅಂದ್ರು ಸರಿ. ನಾನು ಬೆಳಿತಾ ಹೋದ ಹಾಗೆ ಮನೆ ಒಡ್ದು ಮೂರು ಪಾಲಾಯ್ತು. “ಅಬ್ಬ” ನ ಗಂಡು ಮಕ್ಳೆಲ್ಲ ಪಟ್ಟಣ ಸೇರಿದ್ರು. ಇದೇ ನೋವೊ ಅಥವಾ ಇನ್ನೇನೊ ಅಮ್ಮಿ, ಅಬ್ಬ ಇಲ್ಲದ ಚಟಗಳನ್ನೆಲ್ಲ ಬೆಳ್ಸಿಕೊಂಡು ಸಂಪ್ರದಾಯಗಳನ್ನೆಲ್ಲ ಮರೆತು ಬಿಟ್ರು, ಅಷ್ಟೊಂದು ಮೇಲಿದ್ದ ನಾವು, ತೀರ ಕೆಳಮಟ್ಟಕ್ಕೆ ಇಳ್ದು ಬಿಟ್ವಿ. ಎಲ್ಲರ ಮಧ್ಯೆ ಪೆಟ್ಟು ಬಿದ್ದದ್ದು ನಂಗೆ ಮೇಡಂ, ಅದಕ್ಕೆ ಇರ್ಬೇಕು ಒಂಟಿತನ, ಕೆಟ್ಟ ಹಟಮಾರಿತನ ನಂದೇ ಸರಿ ಅನ್ನೊ ಭಾವ, ನನ್ನೊಟ್ಟಿಗೆ ಬೆಳ್ದು ಬಂದ್ವು. ಅರ್ಧಕ್ಕೆ ಓದು ನಿಲ್ಸಿ ಮದ್ವೆಗೆ ಪ್ರಯತ್ನಿಸಿದ್ರು ನಾನು ಕೇಳ್ಬೆಕಲ್ವ, ಹಟ ಅಂದ್ರೆ ಹಟ ನಾನು ಬೆಳ್ದಿದ್ದೆ ಹಾಗೆ ನನ್ನ ಬದುಕಿನ ಎಲ್ಲ ನಿರ್ಣಯಗಳನ್ನು ನಾನೆ ಮಾಡ್ತಿದ್ದೆ ಅಮ್ಮಿ, ಅಬ್ಬ ಯಾವ ವಿಷಯಕ್ಕೂ, ಯಾವತ್ತು ನಂಗೆ ಸಹಾಯ ಮಾಡ್ಲಿಲ್ಲ ಬೆಂಕಿಯಲ್ಲಿ ಅರಳಿದ ಹೂವಾದ್ರೂ, ಬೆಂಕಿಯ ಜೊತೆ ಹೋರಾಡೋದನ್ನ ಕಲ್ತು ಕೊಂಡಿದ್ದೆ. ನನ್ನದೇ ಆದಂತಹ ವ್ಯಕ್ತಿತ್ವ, ಆದರ್ಶಗಳನ್ನು ಬೆಳೆಸಿಕೊಂಡಿದ್ದೆ.

ಪ್ರತಿ ಕೂಲ ಪರಿಸರದಲ್ಲಿ ಬೆಳ್ದದ್ರೂ ಆ ಪರಿಸರದ ವಿರುದ್ಧ ಹೋರಾಡೋ ಧೈರ್ಯ ಬೆಳ್ಸಿಕೊಂಡಿದ್ದೆ. ಒಂದು ರೀತಿಯಲ್ಲಿ ಕೇಡದ ಹಾಗೆ. ಇಂಥ ನನ್ನ ಬದುಕಲ್ಲಿ ಆಕಸ್ಮಾತಾಗಿ ಯಾರದೋ ಪ್ರವೇಶವಾಗಿ ಹೋಯ್ತು.

"ಕೆಲ ಕಾಲವಾದ್ರೂ ನಾನು ಸಂತೋಷವಾಗಿದ್ದೆ ಮೇಡಂ. ನನ್ನ ಆದರ್ಶಗಳನ್ನ ನನ್ನ ವ್ಯಕ್ತಿತ್ವವನ್ನ ಗೌರವಿಸೋ ವ್ಯಕ್ತಿಯ ಸಾಂಗತ್ಯದ ಬಗ್ಗೆ ಬಹಳ ಹೆಮ್ಮೆಯಾಗಿತ್ತು. ಅವನೊಬ್ಬ ಉನ್ನತ ಹುದ್ದೆಯಲ್ಲಿರೂ ವ್ಯಕ್ತಿ. ಹೋದ, ಬಂದ, ಕಡೆಯಲೆಲ್ಲ ಜನ ಅವನನ್ನು ಬನ್ನಿ ಸಾರ್, ಬನ್ನಿ ಸಾರ್, ಎಂದು ಬೆನ್ನು ಬಾಗಿಸುತ್ತಿದ್ದರು. (ಸಾಬಿಯಾ ಹೆಸರು ಹೇಳಲು ನಿರಾಕರಿಸಿದಳು.) ಬಾಲ್ಯದಲ್ಲೆ ತಂದೆಯನ್ನು ಕಳೆದುಕೊಂಡ ತಾಯಿಯ ಹಿರಿಯ ಸಂತಾನ. ಒಬ್ಬ ಕನ್ಯಾಕುಮಾರಿ ಆಸೆಪಡುವ ಎಲ್ಲ ಗುಣಗಳು ಅದರಲ್ಲೂ ಪ್ರೀತಿಯ ನೆರಳನ್ನೇ ಕಾಣದ ನನ್ನಂಥವಳಿಗೆ ಇನ್ನೇನು ಬೇಕಾಗಿತ್ತು ಮೇಡಂ"

"ಹಾರುತ್ತಿರುವ ಹಕ್ಕಿಗೆ ಯಾರೋ ಗುರಿಯಿಟ್ಟು ಭೂಮಿಗುರುಳಿಸಿದಂತೆ, ರಪ್ಪನೆ! ನೆಲಕ್ಕೆ ಬಿದ್ದೆ. ನನಗಾದ ಗಾಯಗಳೆಷ್ಟೋ ನಾನರಿಯೆ. ತಾಯಿಯ ಹಿರಿಯ ಮಗ, ಅವ್ಳ ಮಾತನ್ನು ಮೀರುವಂತಿಲ್ಲ. ನನ್ನ ಮಾತನ್ನೇ ಕೇಳಬೇಕೆಂದು ನಾನೆಂದೂ ಹಟ ಹಿಡಿಯಲಿಲ್ಲ. ಪಾಪ, ಆ ತಾಯಿ ಅವನನ್ನು ಆ ಮಟ್ಟಕ್ಕೆ ತರಲು ಎಷ್ಟು ಕಷ್ಟ ಪಟ್ಟಿರಬಹುದು. ಆಕೆಗೆ ಮಗನ ಮೇಲೆ ಸಂಪೂರ್ಣ ಹಕ್ಕಿದೆ, ಅಧಿಕಾರ ಇದೆ. ತಾಯಿ ಮನಸ್ಸನ್ನು ಸಂತೋಷಪಡಿಸೋ ಕರ್ತವ್ಯ ಮಗನಿಗಿದೆ. ಅವನು ತಾನಾಗೇ ಹತ್ತಿರ ಬಂದಾಗ ಸಾಬಿಯಾ ಬೇಡ ಅಂದಿರ್ಲಿಲ್ಲ. ಅವನಾಗೇ ದೂರ ಹೋದಾಗ ಅತ್ತು ರಂಪಾಟ ಮಾಡ್ಲಿಲ್ಲ, ಮೇಡಂ ಸಾಬಿಯಾ ಒಂಟಿಯಾದ್ಲು ಮೊದಲಿಗಿಂತ ಹೆಚ್ಚು ಒಂಟಿ. ಅವಳ ಕಣ್ಣೆದುರೇ ಅವನ ಮದುವೆ ನಡ್ದು ಹೋಯ್ತು. ಯಾರದ್ದೋ ಮನೆ ಸುಟ್ಟು ಇನ್ನಾರಿಗೂ ಬೆಳಕು." ಸಾಬಿಯಾ ಮೌನವಾಗಿದ್ದಳು ಮೇಡಂ ಸದಾ ಮೌನಿ ಆದ ಅವಳ ನೋವುಗಳ ಪಟ್ಟಿಗೆ ಮರೆಯಲಾಗದ ಇನ್ನೊಂದು ನೋವು ಸೇರಿಸಿ ಹೋಗಿದ್ದ ಬಂದಾತ.

ಆಮೆಯಂತೆ ತೆವಳುತ್ತಲೋ, ಧಾಪುಗಾಲು ಹಾಕುತ್ತಲೊ ಸಮಯ ದಾಟಿಹೋಗಿತ್ತು, ಅನೇಕ ಕಾಲದ ನಂತರ ಆಕಸ್ಮಾತ್ ಒಂದು ದಿನ ದಿಢೀರನೆ ಬಂದು "ನೀನು ನನಗೆ ಬೇಕು ಸಾಬಿಯಾ ಬೇಕು, ನೀನಿಲ್ಲದೆ ಬದುಕಲಾರೆ, ತಾಯಿಯ ಆಸೆ ನೆರವೇರಿಸಬೇಕಿತ್ತು? ನನ್ನ ಮನಸ್ಸಿನ ಆಸೆಯನ್ನ ಯಾರು ಕೇಳ್ತಾರೆ ಸಾಬಿಯಾ, ನೀನು ನನಗೆ ಬೇಕು" ಅಂದಾಗ "ಸಾಬಿಯಾ ಏನು ಹೇಳ್ತಾಳೆ ಹೇಳಿ ಮೇಡಂ" ಯಾವುದನ್ನ ಮರ್ತಿದಿನಿ ಅಂತ ನಾಟಕವಾಡಿ ಮನಸ್ಸನ್ನ ಒಪ್ಸಿದ್ದೊ, ಯಾವ ನೆನಪುಗಳ ಮೇಲೆ ಹೊದಿಕೆಯನ್ನ ಹಾಕಿದ್ದೊ, ಅವೇ ಮತ್ತೆ ದಿಗ್ಗನೆ ಎದ್ದು ಕುಣಿಯೋಕೆ ಶುರು ಮಾಡಿದ್ವು. ಹಸಿ ಹಸಿ ಗಾಯಗಳಿಗೆ ಉಪ್ಪು ಸವರಿದಂತೆ, ಒಂದು ಕಡೆ ಮನಸ್ಸಿನ ಸೆಳೆತ, ಇನ್ನೊಂದೆಡೆ ಆದರ್ಶಗಳ ಅಳಿವು, ಉಳಿವು. "ದೇವ್ರು ನನ್ನ ಹಣೇಲಿ, ಅಡ್ಡಗೆರೆ ಬಿಟ್ರೆ ಮತ್ತೇನು ಬರ್ದಿಲ್ಲ" ಎಂದು ಕಣ್ಣೀರು ನುಂಗಿದ ದಿನಗಳೆಷ್ಟಾಗಿದ್ವೊ, ಸೂರನೆ ದಿಟ್ಟಿಸುತ್ತ ಮಲಗಿದ್ದ ದಿನಗಳೆಷ್ಟಾಗಿದ್ವೊ ಮನಸ್ಸನ್ನ ಕಲ್ಲು ಮಾಡಿ ಬದುಕಲು ಬಯಸಿದಾಗ ವಿಚಲಿತಗೊಳಿಸೋದಿಕ್ಕೆ ಬಂದದ್ದು ಯಾಕೆ ಮೇಡಂ ಅಯ್ಯೋ ಹೀಗಾಯ್ತಲ ಅಂತ ನಾನ್ಯಾವತ್ತು ಗೋಳೋ ಅತ್ತಿಲ್ಲ, ನೀನು ಅಂಥವ್ನು, ಇಂಥವ್ನು ಅಂತ ಅವನ ನ್ಯಾವತ್ತು ದೂರಿಲ್ಲ. ನನ್ನ ಪಾಡಿಗೆ ನಾನು ಚೆನ್ನಾಗಿದ್ದೆ ಮತ್ಯಾಕೆ ಬಂದು ನನ್ನ ನೋಯಿಸಿದ್ದು ಮೇಡಂ"

"ನಾಲ್ಕು ಜನರ ನಡುವೆ ಮದುವೆಯಾದ ಹೆಂಡ್ತಿ ಇದ್ದಾಳಲ್ವ, ಅವ್ಳು ಯಾರ ಇಷ್ಟದಿಂದನೆ ಬಂದಿರ್ಲಿ ಧರ್ಮಪತ್ನಿ ಹೌದಲ್ವ, ಅವ್ಳಿಗೆ ನಾನೊಂದು ಕಿರುಕುಳ ಆಗೋಕೆ ಸಾಧ್ಯನ ಮೇಡಂ ಒಬ್ಬ ಗಂಡಸಿನ ತಪ್ಪಿನಿಂದಾಗಿ ಎರಡು ಹೆಣ್ಣುಗಳಿಗೆ ಯಾಕೆ ಶಿಕ್ಷೆ ಮದುವೆ ಲೈಸನ್ಸ್ ಇದೆ ಅಂತ ಏನು ಬೇಕಾದ್ರು ಮಾಡಬಹುದ ಮೇಡಂ, ಅದು ಆ ಹೆಣ್ಣಿಗೆ ದ್ರೋಹ ಮಾಡಿದ ಹಾಗಲ್ವ, ಒಂದು ಮನಸ್ಸು ಹೀಗಂದ್ರೆ ಇನ್ನೊಂದು ಮನಸ್ಸು "ಇದ್ರಲ್ಲಿ ಅವ್ನ ತಪ್ಪಾದ್ರು ಏನಿದೆ, ಆ ಕಡೆ ತಾಯಿ ಮಾತನ್ನು ತಿರಸ್ಕರಿಸೋ ಹಾಗಿಲ್ಲ ಈ ಕಡೆ ನಲ್ಲೆ ಮಾತನ್ನ ಬಿಡೊಹಾಗಿಲ್ಲ ನಡುವೆ ಏನು ಮಾಡ್ಬೇಕು ಅತ. ಹಿರಿಯರಾದವ್ರು ಮಕ್ಕಳನ್ನ ಅರ್ಥ ಮಾಡ್ಕೊಬೇಕಲ್ವ. ನನಗೆ ಅವ್ನು ಬೇಕು, ಅವ್ನಿಗೆ ನಾನು ಬೇಕು, ಯಾವ ತಾಯಿರದ

ನಂಗೇನು ಯಾವ ಹೆಣ್ಣಿಂದ ತಗೋಳೋದೇನು. ದ್ರೋಹ ಆಗಿದ್ದು ನಂಗೆ, ಅವ್ರಿಗಲ್ಲ. ತ್ಯಾಗಕ್ಕೂ ಒಂದು ಮಿತಿ ಇದೆ. ಎಲ್ಲ ತ್ಯಾಗ ಮಾಡ್ತಾ ಹೋದ್ರೆ ಕೊನೆಗೆ ಸಿಗೋದು ಚಿಪ್ಪೆ! ಅಮ್ಮಿ, ಅಬ್ಬಾ ಜನ್ಮ ಕೊಟ್ರೆ ಹೊರ್ತು ಜೀವನ ಕೊಡ್ಲಿಲ್ಲ; ಹಾಗೆ ಬದಂ ಕಿದ್ರು ಬದುಕೆ, ಹೀಗೆ ಬದುಕಿದ್ರೂ ಬದುಕೆ ಹೀಗೆ ಬದುಕಿದ್ರೂ ಬದುಕೆ ನಾನ್ಯಾಕೆ ಕಷ್ಟದ ದಾರಿನ ಆರಿಸ್ಕೊಬೇಕು. ಎಲ್ರ ಹಾಗೆ ನಾನು ಸಾಮಾನ್ಯ ಮನುಷ್ಯಳೇ ನಂಗು ಆಸೆಗಳು ಇರೋದಿಲ್ವ ಮೇಡಂ, ಹೇಳಿ!" ನಾನೆಲ್ಲೋ ಇದ್ದವಳು ತಕ್ಷಣ ಬೇಕರಿಗೆ ಮರಳಿ ಬಂದೆ. ಮೆಲ್ಲನೆದ್ದು ದುಡ್ಡು ಕೊಟ್ಟು ಬಸ್ ಸ್ಟಾಂಡಿನ ಕಡೆ ಹೆಜ್ಜೆ ಹಾಕಿದೆ. ಸಾಬಿಯಾ ನನ್ನ ಹಿಂದೆ ಬರುತ್ತಿದ್ದವಳು "ಯಾಕೆ ಮೇಡಂ ಸುಮ್ನಾಗಿ ಬಿಟ್ರಿ" ಎಂದಾಗ ಕ್ಷಣ ಹೊತ್ತು ಸುಮ್ಮನಿದ್ದ "ನಿರ್ಣಯ ನಿನಗೆ ಬಿಟ್ಟಿದ್ದು ಸಾಬಿ"

"ಬೆಳಿಗ್ಗೆ ಬಸ್‌ಸ್ಟಾಪಿನಲ್ಲಿ ಇಬ್ಬರು ಬೇಟಿಯಾದಾಗ ಸಾಬಿಯಾಳ ನಗುವಿಗೆ ಪ್ರತಿಯಾಗಿ ನಾನು ನಕ್ಕೆ. ಕಾಲೇಜಿನ ಮೆಟ್ಟಿಲೇರುವಾಗ್ಗ ನಿಧಾನಕ್ಕೆ ಏನು ನಿರ್ಧರಿಸಿದೆ ಸಾಬಿ" ಎಂದೆ ಸಾಬಿಯಾ ಮತ್ತೊಮ್ಮೆ ಮೆಲ್ಲನೆ ನಕ್ಕಳು. ನಾನು ಮುಸ್ಲಿಂಗಿಂತ ಮೊದಲು ಒಬ್ಬ ಹೆಣ್ಣು ಹೌದಲ್ವ ಮೇಡಂ. ಇನ್ನೊಬ್ಬಳ ಬದುಕನ್ನ ಕಿತ್ತುಕೊಳ್ಳುವಷ್ಟು ಕೆಳಮಟ್ಟಕ್ಕೆ ಇಳಿದಿಲ್ಲ ಅಲ್ವ. ಬೆಳೆಸಿಕೊಂಡು ಬಂದ ವ್ಯಕ್ತಿತ್ವ, ಗೌರವ, ಆದರ್ಶ, ಇವುಗಳನ್ನು ಗಾಳಿಗೆ ತೂರಿ, ಮಾನಸಿಕ ಆಮಿಷಕ್ಕೆ ಸೋಲುವಷ್ಟು ಸಾಬಿಯಾ ದುರ್ಬಲಳಲ್ಲ! ನಾನು ಧೀರಳಾಗೆ ಬದುಕಿದಿನಿ, ಧೀರಳಾಗೆ ಬದುಕ್ತಿನಿ. ನಾನೇ ನಾನಾಗಿ ಯಾಕೆ ಹಂಚಿಂದ ಹಾರಿ ಒಲೆಗೆ ಬೀಳೋದು. ಇನ್ನೊಬ್ಬಳ ಪಾಲಿನ ತಿಂಡಿ ಕಸಿದು ತಿನ್ನೋದು, ಬೇಡಿ ತಿನ್ನೋದು, ತಿನ್ನೋದು ಅದೇ ತಿಂಡಿ ತಾನೆ? ಮನಸ್ಸು ಬಂದಾಗ ಬಂದು ಎತ್ಕೊಂಡು ಹೋಗೋಕೆ ನಾನೇನು ಕೈ ಚೀಲನ.? ನೋವಲ್ಲೂ ನಗ್ತಾ ಬದುಕೋದು ನನ್ನ ಕಲೆ. ನಾನು ಹಾಗೆ ಬದುಕಿದಿನಿ, ಹಾಗೆ ಬದುಕ್ತಿನಿ ಮೇಡಂ. ನನ್ನ ಮನಸ್ಸೀಗ ಹಗುರಾಗಿದೆ, ಮುಕ್ತವಾಗಿದೆ, ನಾನು ತುಂಬ ಸಂತೋಷದಲ್ಲಿದಿನಿ ಮೇಡಂ ತುಂಬ ಸಂತೋಷದಲ್ಲಿ"

"ಬಾಗ್ ಬದಲ್ ಜಾಯೆ ತೊ ಕ್ಯಾ,
ಫಿಜಾ ಭಾ ಜಾಯೆ ತೊ ಕ್ಯಾ,
ಬಹಾಲೆಂ ಫಿರ್‌ಭಿ ಆತಿ ಹೈ"

ಹಸಿನಾ. ಗ. ಗುಡಿ.

## ಧಾರ್ಮಿಕ ದೌರ್ಜನ್ಯ

ಐರ್ಲೆಂಡಿನಲ್ಲಿ ಮಹಿಳೆಯರು ಗರ್ಭಪಾತ ಮಾಡಿಸಿಕೊಳ್ಳುವ ಸ್ವಾತಂತ್ರವನ್ನು ಹೊಂದಿಲ್ಲ. ಅಲ್ಲಿನ ಧಾರ್ಮಿಕ ನಂಬಿಕೆಗಳು ಸ್ತ್ರೀಯರ ಈ ಹಕ್ಕನ್ನು ಸಂಪೂರ್ಣವಾಗಿ ಕಸಿದುಕೊಂಡಿವೆ. ಮಹಿಳೆಯರು ಗರ್ಭಿಣಿಯರಾದರೆ ತಮಗೆ ಬೇಡವಾದ ಗರ್ಭವನ್ನು ಇಂಗ್ಲೆಂಡ್‌ಗೆ ಹೋಗಿ ತೆಗಿಸಿಕೊಳ್ಳುವುದು ಸಾಮಾನ್ಯವಾಗಿ ನಡೆದು ಬಂದ ಪದ್ಧತಿ ಇದು ಕಾನೂನು ವಿರುದ್ಧವಾಗಿದ್ದರೂ ಸಾರ್ವಜನಿಕವಾಗಿ ಒಪ್ಪಿಕೊಳ್ಳಲಾಗಿದೆ. ಆದರೆ ಇತ್ತೀಚಿಗೆ ಐರ್ಲೆಂಡಿನಲ್ಲಿ ನಡೆದ ಘಟನೆ ಒಂದು ದೊಡ್ಡ ವಿವಾದವನ್ನೇ ಉಂಟುಮಾಡಿದೆಯಲ್ಲದೆ, ಮಹಿಳೆಯರಿಗೆ ದೊರೆಯಬೇಕಾದ ಮೂಲಭೂತ ನ್ಯಾಯದ ದನಿಯನ್ನು ಎತ್ತಿಹಿಡಿದಿದೆ.

ಅತ್ಯಾಚಾರಕ್ಕೊಳಗಾದ ಮಹಿಳೆಯು ತನಗಾದ ಅನ್ಯಾಯದ ವಿರುದ್ಧ ಪ್ರತಿಭಟಿಸಿ ನ್ಯಾಯಾಲಯದ ಕಟ್ಟೆ ಏರಿದಳು. ಆಕೆಯ ತಂದೆಯು ಅಪರಾಧಿಯನ್ನು ಪತ್ತೆ ಹಚ್ಚಿ ಅಪರಾಧಿಗೆ ಶಿಕ್ಷೆ ನೀಡಬೇಕೆಂದು ಬಲವಾಗಿ ವಾದಿಸಿದರು. ಎಲ್ಲರಂತೆ ಈಕೆಯೂ ಇಂಗ್ಲೆಂಡಿಗೆ ಹೋಗಿ ಗರ್ಭಪಾತಮಾಡಿಸಿಕೊಳ್ಳಬಹುದೆಂದು ಎಲ್ಲರೂ ಭಾವಿಸಿದ್ದರು. ಆದರೆ ಬೇಡವಾದ ಗರ್ಭವನ್ನು ಕಾನೂನು ಪ್ರಕಾರ ತೆಗೆಸಿಕೊಳ್ಳಲು ಅವಕಾಶ ನೀಡಬೇಕೆಂದು ವಾದಿಸಿದರು. ಆದರೆ ಗಾಢವಾದ ಧಾರ್ಮಿಕ ಪ್ರಭಾವಕ್ಕೊಳಗಾದ ಕಾನೂನು ಮಹಿಳೆಯ ಈ ಬೇಡಿಕೆಯ ಬಗ್ಗೆ ಕುರುಡಾಗಿ ವರ್ತಿಸುತ್ತದೆ. ಅತ್ಯಾಚಾರಕ್ಕೊಳಗಾದದ್ದು ಒಂದು ಅಮಾನುಷ ದೌರ್ಜನ್ಯವಲ್ಲದೆ, ಬೇಡವಾದ ಗರ್ಭವನ್ನು ಬೆಳೆಸುವುದು ಅದಕ್ಕಿಂತಲೂ ಕ್ರೂರವಲ್ಲವೆ.

## ಪಂಡಿತಾ

# ರಮಾಬಾಯಿ ಸರಸ್ವತಿ

ಕುಸುಮಾಂಜಲಿ ಸುಬೋಧ ಗ್ರಂಥಮಾಲ
ಸಂ: ಯಂ. ರಾಮರಾವ್,
ಪ್ರ: ೧೯೨೭

ಇಪ್ಪತ್ತು ವರ್ಷಗಳ ವಯಸ್ಸಾದರೂ ಇನ್ನೂ ವಿವಾಹಿತಳಾಗದಿದ್ದುದೂ ಭಾರತ ಸ್ತ್ರೀಯರು ಕಲಿಯ ಕೂಡದೆಂದು ಪ್ರತಿಬಂಧಕವಿದ್ದ ಸಂಸ್ಕೃತ ಭಾಷಾಭ್ಯಾಸವನ್ನು ಮಾಡಿದ್ದುದೂ ರಮಾಬಾಯಿಯನ್ನು ಕುರಿತು ಜನರು ವಿವಿಧ ರೀತಿಯಿಂದ ಮಾತನಾಡಿಕೊಳ್ಳಲು ಹೆಚ್ಚು ಅವಕಾಶವನ್ನು ಕಲ್ಪಿಸಿತು. ಅವರು ಹುಟ್ಟಿ ಬೆಳೆದ ಕಷ್ಟ ಕಾರ್ಪಣ್ಯಗಳ ಕಥೆಯನ್ನು ಕೇಳಿದವರು, ತನ್ನ ಕೊನೆ ಗಾಲದಲ್ಲಿ ಅನಂತಶಾಸ್ತ್ರಿಯು– "ಮಗಳೇ ನಿನ್ನನ್ನು ಭಗವಂತನ ರಕ್ಷಣೆಗೆ ವಹಿಸುತ್ತೇನೆ. ಆತನೇ ನಿನ್ನನ್ನು ಕಾಪಾಡುವನು" ಎಂದು ನುಡಿದಿದ್ದುದು, ಆಕೆಯನ್ನು ಪಶ್ಚಿಮ ಪ್ರಾಂತ್ಯದಲ್ಲಿರುವ ಪದ್ಧತಿಯಂತೆ ವಿಠೋಬನಿಗೆ ದೇವದಾಸಿಯಾಗಿ ಬಿಟ್ಟನೆಂದು ಕೆಲವರು ಅರ್ಥಮಾಡಿಕೊಂಡರು. ಆದರೆ ಹಾಗೆ ಯೋಚಿಸಲು ಏನೂ ಆಧಾರವಿಲ್ಲ. ಅನಂತಶಾಸ್ತ್ರಿಯು ನಮ್ಮ ಸ್ತ್ರೀಯರ ವಿಚಾರದಲ್ಲಿ, ಭಾರತ ಜನಾಂಗದಲ್ಲಿ ಬಹು ದಿನಗಳಿಂದ ನಡೆದು ಬಂದಿರುವ ಕಠಿಣ ನಿರ್ಬಂಧ ಪದ್ಧತಿಗಳನ್ನು ಒಪ್ಪದೆ, ತನ್ನ ಕುಲಸ್ಥರಿಗೂ ಬಂಧು ಬಳಗದವರಿಗೂ ವಿರೋಧವಾಗಿ ತನ್ನ ಹೆಂಡತಿಗೂ ಮಗಳಿಗೂ ವಿದ್ಯಾಭ್ಯಾಸ ಮಾಡಿಸಿದನೆಂಬುದು ಈವರೆಗೆ ತಿಳಿದಿದೆಯಲ್ಲವೆ! ಆ ಅಭಿಪ್ರಾಯದಿಂದಲೇ ತನ್ನ ಮಗಳು ಸಂಪೂರ್ಣ ವಿದ್ಯಾವತಿಯಾಗಿ ತರುವಾಯ ತಾನೇ ಅಪೇಕ್ಷೆ ಪಟ್ಟು ಮೆಚ್ಚುವ ವರನನ್ನು ತನ್ನ ಇಷ್ಟಾನುಸಾರ ವರಿಸಿ ವಿವಾಹವಾಗಲೆಂದು ಮನಸಾ ಅಪೇಕ್ಷಿಸಿದ್ದನಾದುದರಿಂದ ತಾನು ಬದುಕಿರುವವರೆಗೆ ಆಕೆಯ ಮದುವೆಯ ವಿಚಾರವನ್ನು ಕುರಿತು ಯೋಚನೆಯನ್ನೇ ಮಾಡಿರಲಿಲ್ಲ. ಇದಲ್ಲದೆ, ಸುಧಾರಣಾ ಚಿತ್ತವೃತ್ತಿಯ ಆ ಬ್ರಾಹ್ಮಣನು ತನ್ನ ಮಗಳನ್ನು ಹೇಯವಾದ ದೇವದಾಸಿಯನ್ನಾಗಿ ಬಿಡಲು ಒಪ್ಪುವನೆಂದು ಯೋಚಿಸುವುದಾದರೂ ಸರ್ವಥಾ ಉಚಿತವಲ್ಲ!

ಕಲ್ಕತ್ತಾ ಪಟ್ಟಣಕ್ಕೆ ಬಂದ ಕೆಲವು ದಿನಗಳೊಳಗಾಗಿ, ಅವರು ಆಗ ಬ್ರಹ್ಮ ಸಮಾಜದಲ್ಲಿ ಸುಪ್ರಸಿದ್ಧ ಬೋಧಕ ಶಿರೋಮಣಿಯೆನಿಸಿದ್ದ ಕೈಕೇಶವ ಚಂದ್ರಸೇನನ ದರ್ಶನ ಮಾಡಿದರು. ಆತನು ರಮಾಬಾಯಿಯ ವಿದ್ವತ್ತಿಗಾಗಿಯೂ ಪ್ರಜ್ಞಾವಾಗ್ಮಿತೆಗಳಿಗಿಯೂ ಪರಮಾನಂದಪಟ್ಟು ಆಕೆಯನ್ನು ತನ್ನ ಮನೆಯ ಸ್ತ್ರೀಯರಿಗೆ ಪರಿಚಯಮಾಡಿಸಿ, ಆಕೆಗೆ ಒಂದು ವೇದ ಗ್ರಂಥವನ್ನೂ ಕೆಲವು ಉಪನಿಷತ್ಪುಸ್ತಕಗಳನ್ನೂ ಬಹುಮಾನವಾಗಿ ಕೊಟ್ಟು ಅವುಗಳನ್ನೂ ಓದಿಕೊಳ್ಳೆಂದು ಹೇಳಿದನು.

ಇನ್ನೂ ಕೇವಲ ಇಪ್ಪತ್ತು ವರ್ಷ ಪ್ರಾಯದ ಆ ಸ್ತ್ರೀರತ್ನವು ಅಭಿನವ ವಾಗ್ದೇವಿಯೋ ಎಂಬಂತೆ, ದಿವ್ಯ ಗೀರ್ವಾಣಭಾಷೆಯಲ್ಲಿ ಗಂಟೆಗಂಟೆಗಳವರೆಗೆ ಸ್ಫುಟವಾಗಿ ತಡೆಬಡೆಯಿಲ್ಲದೆ ಪ್ರಸಂಗಿಸುತ್ತಿದ್ದುದನ್ನು ಕೇಳಿ, ಆ ನಗರವಾಸಿಗಳು ಅದ್ಭುತಪಟ್ಟರು. ಆಕೆಯಲ್ಲಿಡಗಿದ್ದ ವಿದ್ಯಾಧನವಾದರೂ ಅಲ್ಪವಾದುದಲ್ಲ. ಭಾಗವತ ಮಹಾಗ್ರಂಥದ ಹದಿನೆಂಟು ಸಹಸ್ರ ಶ್ಲೋಕಗಳೂ ಆಕೆಗೆ ಹೃದ್ಗತವಾಗಿದ್ದುವು. ಅಲ್ಲದೆ ಬಹು ಕಠಿಣವಾದ ವ್ಯಾಕರಣ ಶಾಸ್ತ್ರದ ಗೂಢವಿಷಯಗಳೂ ಛಂದಶ್ಶಾಸ್ತ್ರದ ರಹಸ್ಯಗಳೂ ಆಕೆಗೆ ಪರಿಚಯವಾಗಿದ್ದುವು. ಸಂಸ್ಕೃತದಲ್ಲಿ ಸರಾಗವಾಗಿ ಮಾತನಾಡುತ್ತಿದ್ದುದು ಮಾತ್ರವಲ್ಲ, ಸಭೆಯಲ್ಲಿ ನಿಂತಿದ್ದಂತೆಯೇ ಯಾವ ಬಗೆಯ ಶ್ರಮೆಯನ್ನೂ ತೋರ್ಪಡಿಸದೆ ಛಂದೋಬದ್ಧವಾಗಿ ದಿವ್ಯ ಸಂಸ್ಕೃತ ಶ್ಲೋಕಗಳನು

ಕವನಮಾಡಿ ಹೇಳುವ ಸಾಮರ್ಥ್ಯವನ್ನೂ ಗಳಿಸಿದ್ದಳು ಆಕೆಯ ಪ್ರತಿಭೆಗಾಗಿ ಕಲ್ಕತ್ತಾ ಪ್ರಾಂತದ ವಿದ್ವಾಂಸ. ಪ್ರಪಂಚವೇ ಅದ್ಭುತಪಟ್ಟು ಹೋಯಿತು. ಆಕೆಯ ವಿದ್ಯಾವೈದುಷ್ಯಗಳಿಗಾಗಿ ಲುಬ್ಧರಾದ ಕಲ್ಕತ್ತಾ ನಗರದ ವಿದ್ವಾಂಸ ಸಮೂಹವು ಅಲ್ಲಿಯ ವಿಶ್ವವಿದ್ಯಾನಿಲಯದ ಉಪನ್ಯಾಸ ಮಂದಿರದಲ್ಲಿ ಒಂದು ದೊಡ್ಡ ಸಭೆಯನ್ನು ನೆರೆಯಿಸಿ ಅದರಲ್ಲಿ ಆಕೆಯ ಅದ್ಭುತ ಪ್ರಜ್ಞೆ ದಿವ್ಯವಾಗಿ ವಿಜೃಂಭಣೆಗಳನ್ನು ಕುರಿತು ಪ್ರಶಂಸಾರೂಪವಾದ ಕೆಲವು ಶ್ಲೋಕಗಳನ್ನು ಹೇಳಿದರು. ಉತ್ತರಕ್ಷಣದಲ್ಲಿಯೇ ರಮಾಬಾಯಿಯು ಅಲ್ಲಿ ನಿಂತಿದ್ದಂತೆಯೇ ಅದಕ್ಕೆ ಪ್ರತ್ಯುತ್ತರವಾಗಿ ಕೆಲವು ಶ್ಲೋಕಗಳನ್ನು ರಚಿಸಿ ಹೇಳಿದಳು. ಅವು—"ಮಹನೀಯರೇ ತಾವು ನನ್ನ ವಿಷಯದಲ್ಲಿ ಅರ್ಪಣೆ ಕೊಡಿಸಿದ ಈ ಸ್ತುತಿಗೆ ನಾನು ಸರ್ವಥಾ ಪಾತ್ರಳಲ್ಲ. ತಮ್ಮಿಮ್ಮಾ ಸರಸ್ವತೀ ಪ್ರಸಾದದಲ್ಲಿ ನಾನೊಬ್ಬ ದೀನಸೇವಕಳು ಮಾತ್ರ. ಪೂಜ್ಯರಾದ ತಮ್ಮಂತಹ ಸರಸ್ವತ್ಯುಪಾಸಕರು, ನನ್ನ ವಿಷಯವಾಗಿ ಅನುಗ್ರಹಿಸಿದ ಈ ವಿಚಾರಗಳು ಕೇವಲ ಪರಕೀಯಳಾಗಿ ಈ ನಗರವನ್ನು ಪ್ರವೇಶಮಾಡಿದ ನನಗೆ ಬಹು ಭೂಷಣಾಸ್ಪದವಾಗಿವೆ"—ಎಂಬರ್ಥವನ್ನು ಸೂಚಿಸುತ್ತಿದ್ದುವು. ಈ ಬಗೆಯ ಗೌರವವು ಆಕೆಗೆ ಅನೇಕ ಕಡೆಗಳಲ್ಲಿ ನಡೆಯಿತು. ಎಲ್ಲೆಲ್ಲೂ ವರ್ತಮಾನ ಪತ್ರಿಕೆಗಳೂ ಆಕೆಯ ವಿದ್ವತ್ತು ಪ್ರತಿಭೆಗಳನ್ನು ಕುರಿತು ಸಹಸ್ರ ಮುಖವಾಗಿ ಹೊಗಳಿದವು. ಬೊಂಬಾಯಿ ಪ್ರಾಂತದ ಸಮಕಾಲೀನ ಪತ್ರಿಕೆಯೊಂದು–"ನಮ್ಮ ಸದ್ಯದ ಅಧೋಗತಿಗಿಳಿದ ಸ್ಥಿತಿಯಲ್ಲೂ ನಮ್ಮ ಸಹೋದರಿಯರಲ್ಲೊಬ್ಬಳು ತನ್ನ ವಿದ್ಯಾ ಪ್ರೌಢಿಮೆಗಳಿಂದ ಯಾವ ದೇಶದ ಸ್ತ್ರೀ ಕುಲಕ್ಕಾದರೂ ಭೂಷಣಪ್ರದಳಾಗಿದ್ದಾಳೆಂಬುದು, ನಮ್ಮಲ್ಲಿ ದೇಶಾಭಿಮಾನವಿರತಕ್ಕವರು ನಿಜವಾಗಿ ಹೆಮ್ಮೆಪಡತಕ್ಕುದಾಗಿದೆ" ಎಂದು ಬರೆಯಿತು. ಮುಂದೆ ಸ್ವಲ್ಪ ದಿನಗಳಲ್ಲೇ ಕಲ್ಕತಾ ನಾಗರದ (ನವದ್ವೀಪದ) ಸಂಸ್ಕೃತ ವಿದ್ವಾಂಸಮಂಡಲಿಯವರು ಮತ್ತೊಂದು ಘನತರವಾದ ಸಭೆಯನ್ನು ನೆರೆಯಿಸಿ ಅದಕ್ಕೆ ನಮ್ಮ ಕಥಾನಾಯಿಕೆಯನ್ನು ಆಹ್ವಾನಿಸಿ ಆಕೆಯ ಪ್ರತಿಭೆಯನ್ನು ಕುರಿತು ಬಹು ಬಗೆಯಿಂದ ಪ್ರಶಂಸಿಸಿ "ಸರಸ್ವತಿ" ಎಂಬ ಅಸಾಧಾರಣವಾದ ಬಿರುದನಿತ್ತು ಗೌರವಿಸಿದರು. ಸರಸ್ವತಿಯು ವಿದ್ಯಾಭಿಮಾನಿ ದೇವತೆಯಲ್ಲವೆ? ಸರಸ್ವತೀಪುತ್ರರನೇಕರು ನೆರೆದು "ಸರಸ್ವತೀ" ಬಿರುದನ್ನು ಪ್ರಸಾದಿಸಿ ಸನ್ಮಾನಿಸಿದುದರಿಂದ ಮುಂದೆ ಆಕೆಯು "ಪಂಡಿತಾ ರಮಾಬಾಯಿ ಸರಸ್ವತಿ" ಎಂಬ ನಾಮಧೇಯದಿಂದಲೇ ಸರ್ವತ್ರ ಸುಪ್ರಸಿದ್ಧಳಾದಳು.

ಪಂಡಿತಾ ರಮಾಬಾಯಿ ಸರಸ್ವತಿಗೆ ಮುಂದೂ ಅನೇಕ ಸ್ಥಳಗಳಲ್ಲಿ ಗೌರವಾದಿಗಳು ನಡೆದುವು. ಆಗ ಕಲ್ಕತ್ತಾ ನಗರದ ನಿವಾಸಿಗಳಲ್ಲಿ ಶ್ರೇಷ್ಠರೆನ್ನಿಸಿದ್ದ ಮಹಾರಾಜಾ ಜ್ಯೋತೀಂದ್ರ ಮೋಹನ ಠಾಕೂರರು, ದೊಡ್ಡದೊಂದು ಸಭೆಯನ್ನು ನೆರೆಯಿಸಿ, ಆ ಸಭಾಸಮಕ್ಷಮ ಸಂಸ್ಕೃತ ಸಾಹಿತ್ಯ ವಿಚಾರದಲ್ಲಿ ಆಕೆಯನ್ನು ವಿವಿಧ ರೀತಿಯ ಪರೀಕ್ಷೆಗಳಿಗೆ ಒಳಪಡಿಸಿದರು. ಅವುಗಳಲ್ಲೆಲ್ಲಾ ಆಕೆಯು ತೋರ್ಪಡಿಸಿದ ಅತ್ಯದ್ಭುತ ವಿದ್ಯಾಪ್ರೌಢಿಮೆಯೂ, ಶೀಘ್ರ ವಿಷಯಗ್ರಹಣ ಸಾಮರ್ಥ್ಯವೂ, ಸಮಸ್ಫೂರ್ತಿಯೂ, ಕವಿತಾ ಚಾತುರ್ಯವೂ ಸಮಸ್ತ ಸಭಾಸದರನ್ನೂ ಬೆರಗುಗೊಳಿಸಿದವು. ಮತ್ತೊಂದು ವೇಳೆ ಆನಂದಮೋಹನ ಬೋಸರೆಂಬ ಇನ್ನೊಬ್ಬ ದೊಡ್ಡ ಮನುಷ್ಯರು ಒಂದು ಸ್ತ್ರೀಯರ ಸಭೆಯನ್ನು ನೆರೆಯಿಸಿ, ಅಲ್ಲಿಗೆ ನಮ್ಮ ಕಥಾನಾಯಿಕೆಯನ್ನು ಆಹ್ವಾನಿಸಿ, ಒಂದು ಮಾನಪತ್ರವನ್ನೊಪ್ಪಿಸಿದರು. ಅದರಲ್ಲಿ "ಆರ್ಯ ಮಹಿಳಾರತ್ನವೇ ನೀನು ಈ ಭಾರತವರ್ಷಕ್ಕೇ ಭೂಷಣಪ್ರಾಯಳಾಗಿರುವೆ. ನಿನ್ನ ಸಂಬಂಧದಿಂದ ನಾವು ಮಾತ್ರವಲ್ಲ—ಅತ್ಯಂತ ಭಾರತ ದೇಶವೂ ಹೆಮ್ಮೆಪಡುವಂತಿದೆ. ನಿನ್ನೀ ಉದಾಹರಣೆಯು ನಮ್ಮ ಸ್ತ್ರೀ ಜನರ ಮನೋಮಯ ಕೋಶವೂ ಎಂತಹ ಉನ್ನತ-ಅಗಾಧ ವಿಚಾರಗಳಿಂದ ಶೋಭಿಸಲರ್ಹವಾಗಿದೆಯೆಂಬುದನ್ನು ಪ್ರದರ್ಶಿಸುತ್ತಿದೆ. ಈವರೆಗೆ, ನಾವು ನಮ್ಮ ಸ್ತ್ರೀಯರೆದುರಿಗೆ ಪಾಶ್ಚಾತ್ಯ ಸ್ತ್ರೀಯರ ವಿದ್ಯಾವೈದುಷ್ಯಾದಿಗಳನ್ನು ಕುರಿತು ಮಾತ್ರ ಉದಾಹರಣೆಯಾಗಿ ಹೇಳಬೇಕಾಗಿತ್ತು. ಆದರೆ, ಇನ್ನು ಮುಂದೆ, ಅಂತಹ ನಿಸ್ಸಹಾಯ ಸ್ಥಿತಿಗೆ ಒಳಪಡುವ ಅವಶ್ಯಕವಿಲ್ಲವೆಂದು ನಂಬುತ್ತೇವೆ. ಉಪನಿಷತ್ಕಾಲದಲ್ಲ ಪೂರಾಣಕಾಲದಲ್ಲೂ ಭಾರತ ರಮಣಿಯರು ಹೀಗಿದ್ದರೆಂದು ಈವರೆಗೂ ಓದಿದ್ದೆವು ಮಾತ್ರ, ಆದರೆ ಈಗ ನಿನ್ನಲ್ಲಿ ಅವರ ಪ್ರತಿರೂಪವನ್ನು ಕಂಡು ಸಂತುಷ್ಟರಾಗಿದ್ದೇವೆ.

---

# ಹೆಣ್ಣು ಶಿಶುವಿನ ಜನನದ ಬಗ್ಗೆ ಇರುವ ತಾರತಮ್ಯ

ಯಾವುದಾದರೂ ಒಂದು ವಸ್ತುವಿನ ಕೊರತೆಯಾದಾಗ ಮಾತ್ರ ಅದರ ಪ್ರಾಮುಖ್ಯತೆಯ ಅರಿವಾದೀತು. ಪ್ರಪಂಚದಲ್ಲಿ ಹೆಣ್ಣೆ ಇಲ್ಲದಿರುವ ಸ್ಥಿತಿಯನ್ನು ಕಲ್ಪಿಸಿಕೊಳ್ಳುವುದು ಹೇಗಿರಬಹುದು. ೧೯೮೧ ರ ಜನಗಣತಿ ಪ್ರಕಾರ ಗಂಡು-ಹೆಣ್ಣಿನ ಅನುಪಾತ ೧೦೦೦:೯೩೪ ಇದ್ದರೆ, ೧೯೯೧ ರಲ್ಲಿ ೧೦೦೦:೯೨೯ ಎಂದರೆ ಹತ್ತು ವರ್ಷದ ಅಂತರದಲ್ಲಿ ಶೇಕಡಾ ೫ ಇಳಿತ, ಒಟ್ಟು ಜನಸಂಖ್ಯೆಯಲ್ಲಿ ೩.೧೦ ಕೋಟಿ ಪುರುಷರ ಸಂಖ್ಯೆ ಅಧಿಕವಾಗಿದೆ. ಹೆಣ್ಣು ಶಿಶುವಿನ ಜನನದ ಬಗೆಗಿರುವ ತಾರತಮ್ಯ ಮನೋಭಾವ ಇದೇ ರೀತಿ ಮುಂದುವರೆದರೆ ಹೆಣ್ಣು ಗಂಡಿನ ಅನುಪಾತ ಗಂಭೀರ ಸ್ಥಿತಿಯನ್ನು ತಲುಪುತ್ತದೆಂಬುದರಲ್ಲಿ ಅನುಮಾನವೇ ಇಲ್ಲ.

ಸ್ತ್ರೀ-ಪುರುಷರ ನಡುವಿನ ತಾರತಮ್ಯವು ಆದಿಯಿಂದ ಅಂತ್ಯದವರೆಗೆ ಪ್ರತಿ ಹಂತದಲ್ಲಿ ಇರುವಂತಹದ್ದು ಎಂಬುದು ಸ್ಪಷ್ಟ. ಇದರ ಪ್ರಾರಂಭಾವಸ್ಥೆ ಹೆಣ್ಣುಶಿಶು ಜನಿಸಿತು ಎಂಬ ಸುದ್ದಿ ತಿಳಿದೊಡನೆ ಮೂಗು ಮುರಿಯುವಿಕೆ ಮೊದಲೂ ಇತ್ತು, ಈಗಲೂ ಇದೆ. ಹೆಣ್ಣಿನ ಜನನವು ಆಕಾಶವೇ ತಲೆಯ ಮೇಲೆ ಬಿತ್ತೇನೋ ಎಂಬಂತೆ ಮಾಡಿಬಿಟ್ಟಿದೆ. ಗಂಡಿನ ಜನನವನ್ನು ಲಾಭವೆಂದೂ, ಹೆಣ್ಣಿನ ಜನನವನ್ನು ನಷ್ಟವೆಂದೂ ಪರಿಗಣಿಸಿ ಹೆಣ್ಣೆಂದರೆ ಮನೆತೊಳೆಯುವವಳು ಎಂದು ಭಾವಿಸಿಬಿಟ್ಟಿದೆ ನಮ್ಮ ಮನಸ್ಸು. ನಾನು ಬೆಳೆದ ಗ್ರಾಮ್ಯ ಪರಿಸರದಲ್ಲಿ ಅಂತೂ ಎಂತಹ ಮಗು ಎಂದು ಕೇಳಿದ ಪ್ರಶ್ನೆಗೆ ವ್ಯಂಗ್ಯ ಉತ್ತರ ಎಂದರೆ ಬೋಕಿ (ಮಡಿಕೆಯ ಚೂರು) ಎಂದು. ನಿಷ್ಪ್ರಯೋಜಕವಾದ ಮಡಿಕೆಯ ಚೂರಿಗೆ ಹೆಣ್ಣನ್ನು ಹೋಲಿಸಿಕೊಳ್ಳುವ ನಮ್ಮನ್ನು ಛೇಪ್ ಎಂದುಕೊಳ್ಳಲೇಬೇಕು. ಎಂದರೆ ಎಷ್ಟೋದು ಪ್ರೀತಿ-ವಿಶ್ವಾಸದಿಂದ ಹೆಣ್ಣನ್ನು ಈ ಜಗತ್ತಿಗೆ ಬರಮಾಡಿಕೊಳ್ಳುತ್ತೇವೆಯಲ್ಲವೆ? ತಂದೆಯಿರಲಿ ಹೆಣ್ಣಾದ ತಾಯಿಗೆ ಸಹ ಹೆಣ್ಣುಶಿಶುವಿನ ಆಗಮನ ಅಪ್ರಿಯವಾದುದು ಎಂಬುದು ದುರಂತದ ಸ್ಥಿತಿ ಇದಕ್ಕೆ ಕಾರಣಗಳು, ಪೂರ್ವಗ್ರಹಗಳು ಹಲವಾರ

"ಆರತಿಗೊಬ್ಬ ಮಗಳು ಕೀರ್ತಿಗೊಬ್ಬ ಮಗ" ಎಂಬ ಜನಜನಿತ ಕುಟುಂಬ ಯೋಜನಾ ಕಾರ್ಯಕ್ರಮಗಳ ನುಡಿಯೇ ನಿರ್ಧರಿಸುತ್ತದೆ ಮಗಳ ಕಾರ್ಯವನ್ನು. ಕುಲದ ಕೀರ್ತಿ ತರುವವನು ಎಂದಿದ್ದರೂ ಮಗನೇ ಹೊರತು ಮಗಳಲ್ಲವೇ ಅಲ್ಲ. ಎಂಬ ಅಂಶವನ್ನು ಜನರ ಮನಸ್ಸಿನಲ್ಲಿ ಬೇರೂರಿಸಲು ಹೊರಟು ಬಿಟ್ಟಿದ್ದೇವೆ. ಪುತ್ರನು ಪ್ರತಿಷ್ಠೆಯ ಸಂಕೇತವಾಗಿ, ಆಸ್ತಿಯ ಗಳಿಕೆಯಂತೆಯೂ, ಹೆಣ್ಣು ಸಾಲದ ಹೊರೆಯಾಗಿಯೂ ಗ್ರಹಿಸಲ್ಪಟ್ಟಿರುವುದು ಆದಿಯಿಂದ ಬಂದ ಸರ್ವೇಸಾಮಾನ್ಯ ಮನಸ್ಥಿತಿ.

ಹಾಗೆಂದು ಹೆಣ್ಣು ಮಕ್ಕಳನ್ನು ಪೂರ್ತಿ ಯಾರೂ ಇಚ್ಛಿಸುವುದೇ ಇಲ್ಲ ಎಂದಲ್ಲ ಅರ್ಥ. ಆದರೆ ನೀಡುವ ಪ್ರಾಮುಖ್ಯತೆಯ ಸ್ಥಾನ ದ್ವಿತೀಯವಾದುದೇ ಆಗಿದೆ, ಹಾಗಾಗಿಯೇ ಅಲ್ಲವೆ ಸರಿಸುಮಾರಾಗಿ ಪುರುಷನ ಸಂಖ್ಯೆಯಷ್ಟೇ ಹೆಣ್ಣುಗಳಿದ್ದರೂ ಎರಡನೇ ವರ್ಗದ ನಿವಾಸಿಯಾಗಿಯೇ ಉಳಿದಿರುವುದು. ಹೆಣ್ಣನ್ನು ತಂದೆತಾಯಿಯರು ಯಾರೂ ಪ್ರೀತಿಯಿಂದ ಸಾಕಿಸಲಹಿಯೇ ಇಲ್ಲ, ಮನ್ನಣೆ ನೀಡಿಯೇ ಇಲ್ಲ ಎಂಡರ್ಥವಲ್ಲದಿದ್ದರೂ ಈ ರೀತಿಯ ಮನ್ನಣೆ ಸಿಗಬೇಕಾದ ಪ್ರಮಾಣದಲ್ಲಿ ಸಿಕ್ಕಿಲ್ಲ ಎಂಬುದು ಮುಖ್ಯ ವಿಚಾರ. ಇಲ್ಲೆಲ್ಲ ಪ್ರಮುಖವಾಗಿ ಕೆಲಸ ಮಾಡುವುದು, ಗಂಡು ಸಂತಾನದಿಂದ ವಂಶದ ಮುಂದುವರಿಕೆ, ಇಲ್ಲದಿದ್ದರೆ ನಮ್ಮ ತಲೆಮಾರಿನ ಹೆಸರು ಹೇಳುವವರಿಲ್ಲದೆ ಇಲ್ಲಿಗೇ ಕೊನೆಗೊಳ್ಳುತ್ತದೆ ಎಂಬ ಪೂರ್ವಾಗ್ರಹವೇ ಹೊರತು ಮತ್ತೇನೂ ಅಲ್ಲ.

ಇದಕ್ಕೆ ನಿದರ್ಶನಗಳು ಹಲವಾರು. ನನ್ನ ಪರಿಸರದ ಒಬ್ಬರ ಬಗ್ಗೆ ಹೇಳುವುದಾದರೆ, ಸಬ್ ಇನ್‌ಸ್ಪೆಕ್ಟರ್ ಆದ ಒಬ್ಬ ವ್ಯಕ್ತಿಗೆ ಅವಳಿಜವಳಿಯಾದ ಎರಡು ಹೆಣ್ಣುಮಕ್ಕಳು. ಆ ಮಕ್ಕಳು ಬೆಳೆದು ವಿವಾಹದ ಸ್ಥಿತಿ ತಲುಪಿದರೂ ತನಗೆ ಪುತ್ರನಿಲ್ಲದ ಕೊರಗು ಆ ವ್ಯಕ್ತಿಗೆ ಭಾಧಿಸುತ್ತಲೇ ಇತ್ತು, ತನ್ನ ಮಗಳಿಗೆ ವಿವಾಹವಾದ ನಂತರವೂ ಪಟ್ಟು ಬಿಡದೆ

ಎರಡನೇ ವಿವಾಹವಾಗಿ ಒಬ್ಬ ಪುತ್ರನನ್ನು ಪಡೆದೇ ಬಿಟ್ಟರು! ನಂತರ ಮೊದಲ ಪತ್ನಿ, ಹೆಣ್ಣುಮಕ್ಕಳು ಕಾಲಕಸ, ಹೆಸರಿಗೆ ಮಾತ್ರ ಮೊದಲು ಪತ್ನಿಯಿಂದ ವಿಚ್ಛೇಧನ ಪಡೆಯದ ಹೊರತು ಎರಡನೇ ವಿವಾಹ ಆಗಬಾರದೆಂಬ ನಿಯಮಗಳು ಕಡತಗಳಲ್ಲಿ ಮಾತ್ರ. ಆದರೆ ಆಚರಣೆಗೆ ಬಂದಾಗ ಕಾನೂನಿನ ರಕ್ಷಣೆಗೆ ತೊಡಗಿದ ಗಣ್ಯ ವ್ಯಕ್ತಿಗಳೇ ಹೀಗಾಗಿ, "ಬೇಲಿಯೇ ಎದ್ದು ಹೊಲ ಮೇಯುವಂತಾದರೆ" ರಕ್ಷಣೆಯಾದರೂ ಎಲ್ಲಿಂದ.? ಈ ನಿದರ್ಶನವನ್ನು ಇಲ್ಲಿ ನೀಡಲು ಕಾರಣ ಪುತ್ರೋತ್ಸವದ ಮಹದಾಕಾಂಕ್ಷೆ ವ ಹಂತದವರೆಗಾದರೂ ಗುಪ್ತವಾಗಿ ಬೇರು ಬಿಟ್ಟಿರುತ್ತದೆಂಬುದನ್ನು ಸೂಚಿಸುವುದಕ್ಕೆ ವಿನಹ ಯಾವುದೇ ವ್ಯಕ್ತಿಯ ಅಪಾದನೆಗಾಗಿ ಅಲ್ಲ.

ಹಾಗಾಗಿಯೇ ಗಂಡು ಮಗು ಜನಿಸದೆ, ಕೇವಲ ಹೆಣ್ಣು ಶಿಶುಗಳೇ ಜನಿಸುತ್ತಿದ್ದರೆ ೧೦-೧೨ ಹೆಣ್ಣು ಶಿಶುಗಳ ನಂತರವೂ ತಾಳ್ಮೆಯಿಂದ ಆಶಾವಾದಿಗಳಾಗಿ ಪುತ್ರನ ಆಗಮನಕ್ಕಾಗಿ ಕಾತುರವಾಗಿ ಕಾಯುವ ಮನಸ್ಥಿತಿಯನ್ನು ನೋಡಿಯೇ ತಿಳಿಯಬಹುದು. ಹಾಗೆಂದು ನಿರಂತರವಾಗಿ ಗಂಡು ಶಿಶುಗಳೇ ಜನಿಸಿದರೆ ಹೆತ್ತವರಿಗೆ ಆನಂದವೇ. ಏಕೆಂದರೆ ಅವರೆಂದೂ ಗಳಿಕೆಯೇ ಹೊರತು ನಷ್ಟದ ಪ್ರಶ್ನೆ ಎಲ್ಲಿಂದ ಬರಬೇಕು. ನಿರಂತರ ಗಂಡು ಶಿಶುಗಳ ಜನನದ ನಂತರ ಎಷ್ಟು ಜನ ಪೋಷಕರು ಕಾತರರಾಗಿ ನಮಗೆ ಹೆಣ್ಣು ಶಿಶುವೊಂದು ಬೇಕೇ ಬೇಕು ಎಂದು ಕಾಯಬಲ್ಲರು? ಇಲ್ಲವೇ ಇಲ್ಲವೆನ್ನಲಾಗದಿದ್ದರೂ ಬೆರಳೆಣಿಕೆಯದಿರಬಹುದು. ಈಗ ಕುಟುಂಬ ಯೋಜನೆಗಾಗಿ ಜನಸಂಖ್ಯಾ ನಿಯಂತ್ರಣ ನಡೆಯುತ್ತಿದೆ ನಿಜ. ಪ್ರಾರಂಭಕ್ಕೆ ಗಂಡಾಗಿ ಬಿಟ್ಟರಂತೂ ಭಾರೀ ಸಂತೋಷವಾಗಿಯೇ ಒಂದು-ಎರಡು ಸಾಕೆಂದು ತೀರ್ಮಾನಿಸುವ ನಾವು, ಆ ಒಂದು-ಎರಡು ಬರೀ ಹೆಣ್ಣಾಗಿ ಬಿಟ್ಟರಂತೂ ದುಬಾರಿಯ ಸ್ಥಿತಿಯೆಂದು ತಿಳಿದು ಮಕ್ಕಳು ಸಾಕೆಂದು ತಡೆ ಹಾಕಿದರೂ ಅಸಮಾಧಾನವಂತೂ ಹೆಚ್ಚು ಜನಕ್ಕೆ ಇರುವಂತಹದ್ದೇ ಆಗಿದೆ. ಈಗಂತೂ ಅಭಿವೃದ್ಧಿಯಾದ ವೈದ್ಯಕೀಯ ಸವಲತ್ತುಗಳಿಂದ ಈ ಜಗತ್ತಿನ ಗಾಳಿಯ ಸ್ಪರ್ಶವೇ ಹೆಣ್ಣಿಗೆ ಬೇಡವೆಂದು ಭ್ರೂಣಾವಸ್ಥೆಯಲ್ಲಿಯೇ ನಿರ್ನಾಮ ಮಾಡುವಷ್ಟು ಮುಂದುವರಿದಿದ್ದೇವೆ ನಾವು. ಈ ವಿಚಾರಗಳಿಂದಲೇ ತಿಳಿಯುವುದಿಲ್ಲವೇ ಈವರನ್ನು ನಾವು ಪ್ರಪಂಚಕ್ಕೆ ಸ್ವಾಗತಿಸುವ ರೀತಿ.

ಇದಕ್ಕಿರುವ ಪೂರ್ವಗ್ರಹಗಳಲ್ಲಿ ಮುಖ್ಯವಾಗಿ ಅಂತ್ಯಕ್ರಿಯೆಗಳನ್ನು ನೆರವೇರಿಸಲು ಪುತ್ರನೇ ಆಗಬೇಕೆಂಬುದು. ಆಗ ಮಾತ್ರ ಆತ್ಮಕ್ಕೆ ಶಾಂತಿ, ಇಲ್ಲದಿದ್ದರೆ ಮೋಕ್ಷವೇ ದೊರಕಲಾರದು ಎಂದೆಲ್ಲ ಕಲ್ಪನೆಗಳು ನಾವೇ ಸೃಷ್ಟಿಸಿಕೊಂಡವಲ್ಲವೆ? ಆಕಸ್ಮಾತ್ ಪುತ್ರನಿಲ್ಲದಿದ್ದಾಗಲೂ ಪುತ್ರ ಸಮಾನರಾದ ಸಂಬಂಧಿಕರಿಂದ ಆ ಕಾರ್ಯ ನಡೆಯಬೇಕೆ ವಿನಹ ಪುತ್ರಿ ಎಂದೆಂದೂ ಈ ಧಾರ್ಮಿಕ ವಿಧಿಗಳಿಗೆ ಅರ್ಹಳಾಗುವುದೇ ಇಲ್ಲ. ಎಲ್ಲ ಧಾರ್ಮಿಕ ವಿಧಿಗಳು ಗಂಡಿನ ಸ್ವತ್ತು. ಸ್ತ್ರೀ ಅನರ್ಹಳು ಏಕೆಂದರೆ ಆಕೆ ಅಸ್ಪೃಶ್ಯಳು ಎಂದು ಭಾವಿಸಲಾಗಿದೆ. ಮಾಸಿಕ ರಜಸ್ಸನ್ನೇ ಪ್ರಧಾನ ಕಾರಣವಾಗಿ ಒಡ್ಡುತ್ತಾರೆಯೇ ವಿನಹ ಇದು ಪ್ರಕೃತಿ ಸಹಜವಾದ ಕ್ರಿಯೆ ಸಕಲ ಜೀವೋತ್ಪತ್ತಿಗೆ ಮೂಲ ಎಂಬೆಲ್ಲವನ್ನು ಆಲೋಚಿಸುವುದು ಸಹಾ ಪಾಪಕರವೆಂದು ತಿಳಿದುಬಿಟ್ಟಿದ್ದೇವೆ.

ಹೀಗೆಲ್ಲ ಅನೇಕ ನಿರ್ಬಂಧಗಳನ್ನು ಹೆಣ್ಣಿಗೆ ಸೃಷ್ಟಿಸಲು ಕಾರಣವಾದರೂ ಏನು. ಸಮಾಜದ ಎಲ್ಲ ವ್ಯವಸ್ಥೆಯನ್ನು ನಿರ್ವಹಿಸುತ್ತಿದ್ದುದು ಪುರುಷ ಮನಸ್ಸು ಆದಿಯಲ್ಲಿ ಎಲ್ಲ ವಿಧಿ, ವಿಧಾನ, ನಿರ್ಬಂಧಗಳನ್ನು ನಿರ್ಮಿಸಿದ್ದು ಪುರುಷರೇ ಎಂದ ನಂತರ ಸಹಜವಾಗಿಯೇ ಅವರಿಗೆ ಅನುಕೂಲಕರ ಸ್ಥಿತಿಯನ್ನು ನಿರ್ಮಿಸಿ ನಂತರದ ಸ್ಥಾನವನ್ನು ತನ್ನ ಅಧೀನರಿಗೆ ಬಿಟ್ಟುಕೊಡುವುದು ಸರ್ವೇಸಾಮಾನ್ಯ. (ಹಾಗೆಂದು ಧಾರ್ಮಿಕ ವಿಧಿಗಳಲ್ಲಿ ಹೆಣ್ಣಿಗೆ ಸ್ಥಾನಮಾನ ಇದ್ದಿರಲಿಲ್ಲ ಎಂದೇನೂ ಅಲ್ಲ ಹೆಣ್ಣಿನ ಸ್ಥಾನಮಾನಗಳು ಉನ್ನತ ಸ್ಥಿತಿಯಲ್ಲಿದ್ದ ಕಾಲವೊಂದಿರಲಿಲ್ಲವೆಂದೇನೂ ಅಲ್ಲ.)

ಹೆಣ್ಣು ಜನನವನ್ನು ಅನಾದರ ಮಾಡಲು ಇದೊಂದೇ ಕಾರಣವೇ? ಖಂಡಿತ ಇಲ್ಲ. ಈ ಅಸಡ್ಡೆಗೆ ಮತ್ತೊಂದು ಕಾರಣ "ಆಕೆ ಪರರ ಒಡವೆ" ಎಂಬುದೇ ಆಗಿದೆ. ಹೆಣ್ಣು ವಿವಾಹವಾಗಿ ಪತಿಯ ಮನೆಗೆ ಬೆಳಕಾಗಿ ಹೋಗುವುದು ಸ್ವಾಭಾವಿಕ ಅನಿವಾರ್ಯ. ಇದಕ್ಕಾಗಿಯೇ "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಎಂಬ ನಾಣ್ನುಡಿಗಳು ಸಹ ಹೆಣ್ಣು ಪರರ ಮನೆಗೆ ಜ್ಯೋತಿಯಾಗಿ ಹೋಗುತ್ತಾಳೆ ಎಂಬ ಕಾರಣವೊಂದಕ್ಕಾಗಿಯೇ ಹೆಣ್ಣು ಶಿಶುವನ್ನು ನಿರ್ಲಕ್ಷಿ

ಷುವುದಾದರೆ ಸಮಾನ ಪಾಲುದಾರಳಾದ ಹೆಣ್ಣಲ್ಲದೆ ಮುಂದಿನ ಸೃಷ್ಟಿಕ್ರಿಯೆಯಾದರೂ ಹೇಗೆ ಸಾಧ್ಯ? ಹಾಗೆಂದು ಹಿಂದಿನ ಪೋಷಕರೂ ಯೋಚಿಸಿ ಹೆಣ್ಣಿನ ಅಸ್ತಿತ್ವವಿಲ್ಲದಿದ್ದರೆ ಈಗ ಹೀಗೆ ಯೋಚಿಸುತ್ತಿರುವ ಪೋಷಕರ ವೈವಾಹಿಕ ಸ್ಥಿತಿಯಾದರೂ ಹೇಗೆ ಇದ್ದಿರಲು ಸಾಧ್ಯ. ಸಮಾಜದ ಮುಂದುವರಿಕೆಗೆ ಇಬ್ಬರೂ ಸಮಾನ ಪಾತ್ರರು ಎಂಬುದನ್ನೇ ನಾವು ಮರೆತಂತಿದೆ.

ಹೀಗೆಲ್ಲ ಯೋಚಿಸುವುದು ಗಂಡು ಮಾತ್ರ ಎಂದರೆ ತಪ್ಪಾದೀತು. ಹೆಣ್ಣಾದ ತಾಯಿ ಸಹ ತಾನೂ ಒಬ್ಬ ಹೆಣ್ಣು ಎಂಬುದನ್ನು ಮರೆತರೀತಿ ವರ್ತಿಸುವ ಕಾರಣವೇ ತಾಯಂದಿರಿಗೂ ಸಹ ಹೆಣ್ಣು ಮಗು ಬೇಕಾಗಿಲ್ಲ. ಆಕೆ ಜನಿಸಿದಾಗ ಆಕೆಯ ಪೋಷಕರು ತೋರ್ಪಡಿಸಿಕೊಂಡಿದ್ದಂತಹ ಅಸಮಾಧಾನವನ್ನು ವಂಶಪಾರಂಪರ್ಯವಾಗಿ ಆಕೆಯೂ ಮುಂದುವರಿಸಬೇಕೆಂದಿದೆಯೆ? ಹೆಣ್ಣು ಬೇರೆಯವರ ಒಡವೆ ಎಂದು ಭಾವಿಸಿದ ಕಾರಣ ಆಕೆಯ ಬೆಳವಣಿಗೆ, ಆರೋಗ್ಯ, ಶಿಕ್ಷಣ ಎಲ್ಲದರ ಕಡೆಗೆ ಹೆಚ್ಚು ಗಮನ ಕೊಡಲಾರೆವು. ಹೆಣ್ಣು ಸೌಮ್ಯವಾಗಿ ಹೆಣ್ಣಿನಂತಿರಬೇಕೇ ವಿನಹ ಗಂಡುಬೀರಿಯಾಗಬಾರದು ಎಂಬೆಲ್ಲ ನುಡಿಗಳು ಸದಾ ಹೆಣ್ಣಿನ ಕಿವಿಯಲ್ಲಿ ಅನುರಣಿಸುವ ಕಾರಣವೇ ಹೆಣ್ಣಿನ ಮಿತಿಗಳೇನು ಎಂಬುದಕ್ಕೆ ಸ್ಪಷ್ಟ ಗೆರೆಯನ್ನೆಳೆದುಕೊಂಡು ಬಿಡುತ್ತಾಳೆ. ಗಂಡುಬೀರಿ ಹೆಣ್ಣನ್ನು ಮತ್ತೆ ಹೆಣ್ಣುಬೀರಿಯನ್ನಾಗಿಸಲು ಸಕಲ ಪ್ರಯತ್ನ ಮಾಡುತ್ತೇವೆ.

ಹೆಣ್ಣಿನ ಉಪೇಕ್ಷೆಗೆ ಮತ್ತೊಂದು ಕಾರಣವೆಂದರೆ ಆದ್ದರಿಯಿಂದ ಹೆಣ್ಣಿನ ಕಡೆಯವರೇ ವಿವಾಹ ಮಾಡಿಕೊಡಬೇಕಾದ ಸ್ಥಿತಿ ಅನೇಕ ಕಡೆ ಇದೆ. ಹೆಣ್ಣಿನ ಒಡವೆ–ವಸ್ತ್ರಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತವೆ. ತನಗೆ ಮುಳುವಾಗಬಹುದಾದ ಚಿನ್ನದ ಆಪೇಕ್ಷೆಯನ್ನೇ ಹೆಣ್ಣು ತ್ಯಜಿಸಿಬಿಟ್ಟಿದ್ದರೆ, ಅವನ್ನು ಸ್ವೀಕರಿಸುವ ರೀತಿಯಲ್ಲಿ ಕ್ವಚಿತ್ತಾದರೂ ಸಡಿಲಿಕೆಯುಂಟಾಗುತ್ತಿತ್ತೇನೋ? ದುಬಾರಿ ಚಿನ್ನಕ್ಕಾಗ ಹಿಂದಿನಷ್ಟು ಬಲವನ್ನು ತೋರುತ್ತಿಲ್ಲವೆಂಬುದು ಸ್ವಲ್ಪವಾದರೂ ಸತ್ಯಕ್ಕೆ ಹತ್ತಿರವಾದೀತು.

ಮಾತ್ರಾ ಪ್ರಮುಖವಾಗಿ ತಾಳಿಕಟ್ಟುವುದಕ್ಕಾಗಿ ನಮ್ಮ ವರದ ಮಹಾಶಯರು ಕೇಳುವ ದುಬಾರಿ ಕೂಲಿಯಿಂದಾಗಿ ಹೆಣ್ಣಿನ ಜನನವನ್ನು ಸಮಾಜ ಅಪೇಕ್ಷಿಸದಂತೆ ಮಾಡಿಬಿಟ್ಟಿದೆ. ದಿನೇದಿನೇ ಈ ದರಗಳು ಹೆಚ್ಚುತ್ತಲೇ ಹೋಗುತ್ತಿವೆ. ಗಂಡನ್ನು ಅವರ ಪೋಷಕರು ಓದಿಸಿದ, ಕೆಲಸಕ್ಕೆ ಸೇರಿಸಿದ ಎಲ್ಲ ಖರ್ಚನ್ನು ಅತ್ತೆಮಾವ ತುಂಬಿಕೊಡಬೇಕು (ಹೀಗಾಗಿಯೇ ಇರಬೇಕು ಗಂಡಿನ ಜನನವನ್ನು ಆಸ್ತಿ ಎಂದು ಭಾವಿಸಿರುವುದು). ಗಂಡಿನಷ್ಟೆ ಸಮಾನಳಾಗಿ ಓದಿದ ಹೆಣ್ಣಿನ ಆ ಖರ್ಚನ್ನೆಲ್ಲಾ ಭರಿಸುವವರು ಯಾರು? ಇದಕ್ಕೆ ಉತ್ತರವಿಲ್ಲ. ನಿಮ್ಮ ಹೆಣ್ಣನ್ನು ಜೀವನಪರ್ಯಂತ ಸಾಕುವುದಿಲ್ಲವೆ? ಎಂದು ಕೇಳುತ್ತಾರೆಯೇ ವಿನಹ ಆ ಮನೆಯ ಏಳಿಗೆಗಾಗಿ ಹಗಲಿರುಳು ಗಾಣದೆತ್ತಿನಂತೆ ದುಡಿದೂ, ಮೇಣದ ಬತ್ತಿಯಂತೆ ತನ್ನ ಅಸ್ತಿತ್ವವನ್ನು ಇಲ್ಲವಾಗಿಸಿಕೊಳ್ಳುವ ಹೆಣ್ಣಿನ ಶ್ರಮ ಗೌಣವಾಗಿ ಬಿಡುತ್ತದೆ. ಅನುಕೂಲಸ್ಥ ಪೋಷಕರು ಪ್ರೀತಿಯಿಂದ ತಮ್ಮ ಅನುಕೂಲಕ್ಕೆ ತಕ್ಕಂತೆ ತಮ್ಮ ಮಗಳಿಗೆ ಒಡವೆ ವಸ್ತುಗಳನ್ನು ಕೊಡುತ್ತಿದ್ದುದು ನಿಜ. ಆದರೀಗ ಕುತ್ತಿಗೆಯ ಮೇಲೆ ಕೂತು ಹೆಣ್ಣು ಹೆತ್ತವರಿಗೆ ಉರುಳಾಗುವುದು ಯಾವ ಧರ್ಮ. ಗಂಡಿನ ಪೋಷಕರಾದ ತಂದೆ ಮಾತ್ರವಲ್ಲದೆ ಹೆಣ್ಣೆನಿಸಿದ ತಾಯಿ ಸಹ ನಿರ್ಬಂಧ ಪಡಿಸುವ ಸ್ಥಿತಿ ಸರ್ವೇಸಾಮಾನ್ಯ. ಹೀಗೆ ಹೆಣ್ಣಿಗೆ ಮುಳುವಾಗುವುದು ಎಂತಹ ಶೋಚನೀಯ ಪರಿಸ್ಥಿತಿ.

ಹೆಣ್ಣಿಗೆ ವಿವಾಹದ ನಿರ್ಬಂಧ ಹಾಕಿ ವಿವಾಹವೇ ಹೆಣ್ಣಿನ ಅಂತಿಮ ಗುರಿ ಎಂಬಂತೆ ಮಾಡಿ ಬಿಟ್ಟಿರುವುದೇ ಈ ವರದಕ್ಷಿಣೆ ಸಮಸ್ಯೆ ದಿನೇದಿನೇ ದುಬಾರಿಗೊಳ್ಳಲು ಕಾರಣ. ವಿವಾಹವಿಲ್ಲದೆಯೂ ಸ್ವತಂತ್ರವಾಗಿ ಜೀವಿಸಬಲ್ಲೆವೆಂಬ ದೃಢತೆಯನ್ನು ನಮ್ಮ ಹೆಣ್ಣುಮಕ್ಕಳಿಗೆ ತಂದುಕೊಡಬೇಕಾಗಿದೆ. ವರದಕ್ಷಿಣೆಯನ್ನು ತೆಗೆದುಕೊಳ್ಳುವ ಗಂಡೇ ಬೇಡವೆಂದು ಒಗ್ಗಟಿನಿಂದ ಪ್ರತಿಭಟಿಸಿದಾಗ ಈ ಸ್ಥಿತಿಗೆ ಕಡಿವಾಣವನ್ನು ಸ್ವಲ್ಪಮಟ್ಟಿಗಾದರೂ ಹಾಕಬಹುದು. ಹೇಗಾದರೂ ಸರಿ ಹೊರೆಯಂತಿರುವ ಹೆಣ್ಣು ಹೊರಗೆ ಹೋದರು ಸಾಕು ಎಂಬಂತೆ ಸಾಲಸೋಲ ಮಾಡಿಯಾದರೂ ತಮ್ಮ ಕರ್ತವ್ಯವನ್ನು ಮುಗಿಸಿಕೊಳ್ಳುವ ಪೋಷಕರ ಮನಸ್ಥಿತಿ ಸಹ ಬದಲಾಗಬೇಕು. ಕನ್ಯೆಯನ್ನು ವ್ಯಕ್ತಿ ಎಂಬುದಕ್ಕೆ ಬದಲಾಗಿ ವಸ್ತುವೆಂಬಂತೆ ಧಾರೆ ಎರೆದುಕೊಡುವಲ್ಲಿ

ನಮ್ಮ ಪೋಷಕರು ಆಸಕ್ತಿ ವಹಿಸಿಬಿಡುತ್ತಾರೆ. ಅವಳ ಅಸ್ತಿತ್ವಕ್ಕೆ ಮನ್ನಣೆ ದೊರೆತು ಸಮಾನಾವಕಾಶಗಳು ದೊರೆತಾಗ ತನ್ನ ಜೀವನವನ್ನು ತಾನೇ ರೂಪಿಸಿಕೊಳ್ಳಬಲ್ಲಳು, ವರದಕ್ಷಿಣೆಯ ಭೂತಕ್ಕೆ ಪ್ರತಿಭಟಿಸಬಲ್ಲಳು. ವರದಕ್ಷಿಣೆ ಯಾವ ತೀವ್ರ ಸ್ಥಿತಿ ತಲುಪಿದೆ ಎಂಬುದಕ್ಕೆ ಉದಾಹರಣೆಯಾಗಿ ೪ ಗಂಡುಮಕ್ಕಳ ತಂದೆಯೊಬ್ಬರು ಮಡಿದಾಗ. ದುಡಿಯುವ ಸ್ಥಿತಿಯಲ್ಲಿದ್ದ ಹುಡುಗರು ಹೇಳಿದ ಮಾತುಗಳೆಂದರೆ "ಸಧ್ಯ ನಮ್ಮ ತಂದೆ ಯಾವ ಆಸ್ತಿ ಮಾಡಿಟ್ಟು ಹೋಗದಿದ್ದರೂ ಪರವಾಗಿಲ್ಲ, ನಮ್ಮ ತಲೆ ಮೇಲೆ ಭಾರವಾಗಿ ಹೆಣ್ಣೊಂದನ್ನು ಬಿಟ್ಟುಹೋಗಲಿಲ್ಲ ಎಂಬುದಕ್ಕೆ ಧನ್ಯವಾದ ಅರ್ಪಿಸಬೇಕಾಗಿದೆ" ಎಂದು ಹೀಗೆ ಮಾತನಾಡಿದ್ದು ಅವರ ತಪ್ಪಲ್ಲ. ನಮ್ಮ ಸಮಾಜದಲ್ಲಿ ತೀವ್ರವಾಗಿ ಎದ್ದು ಕಾಣುತ್ತಿರುವ ವರದಕ್ಷಿಣೆಯು ಕ್ರೂರ ವ್ಯವಸ್ಥೆಯೇ ಆಗಿದೆ.

ಹೀಗೆ ಕೆಲವು ಕಾರಣಗಳಿಗಾಗಿ ಹೆಣ್ಣು ಶಿಶುವನ್ನು ಪ್ರೀತಿಯಿಂದ ಈ ಜಗತ್ತಿಗೆ ಆಹ್ವಾನಿಸದಿರುವಲ್ಲಿ ನಮ್ಮ ಸಾಮಾಜಿಕ ಸ್ಥಿತಿಗತಿಗಳು ಪ್ರಧಾನವಾಗಿದೆ. ಹೊರೆಯಾಗದೆ ಸ್ವತಂತ್ರವಾಗಿ ತನ್ನ ಜೀವನವನ್ನು ತಾನೇ ರೂಪಿಸಿಕೊಳ್ಳಬಲ್ಲೆನೆಂಬ ಮನೋಭಾವವನ್ನು ಪೋಷಕರು, ಶಿಕ್ಷಣ ಸಂಸ್ಥೆಗಳು ತಂದುಕೊಡಬೇಕಾಗಿದೆ. ಸ್ವಾವಲಂಬನೆಯ ಜೀವನವನ್ನು ಹೆಣ್ಣುಗಳು ರೂಢಿಸಿಕೊಳ್ಳಬೇಕಾಗಿದೆ, ವಿವಾಹವೊಂದೇ ಅಂತಿಮ ಗುರಿ ಎಂದು ಭಾವಿಸದೆ ಗಂಡುಮಗುವಿನಷ್ಟೇ ಪ್ರಾಧಾನ್ಯತೆಯನ್ನು ಎಲ್ಲ ಕ್ಷೇತ್ರಗಳಲ್ಲಿಯೂ ನೀಡಬೇಕಾಗಿದೆ. ಮೂಲಭೂತವಾಗಿ ಮನಸ್ಸಿನಲ್ಲಿ ಮನೆಮಾಡಿರುವ ಪೂರ್ವಗ್ರಹಗಳನ್ನು ತ್ಯಾಗಮಾಡಿಸಿಕೊಂಡು ಹೆಣ್ಣು ಮಗುವನ್ನು ಸಹ ಗಂಡುಮಗುವಿನಷ್ಟೇ ಸಮಾನ ಪ್ರೀತಿ ವಿಶ್ವಾಸದಿಂದ ಈ ಜಗತ್ತಿಗೆ ಬರಮಾಡಿಕೊಳ್ಳುವುದು ನಾವೆಷ್ಟು ನಾಗರೀಕತೆಯ ಹಾದಿಯೆಡೆಗೆ ನಡೆದಿದ್ದೇವೆ ಎಂಬುದನ್ನು ತೋರುತ್ತದೆಯಲ್ಲದೆ?

ಪಿ. ಆರ್. ಸಾವಿತ್ರಿ.

---

## "ಯಶಸ್ವಿ ಮಹಿಳಾ ಸಮಾಜ"

ಬೆಂಗಳೂರಿನ ಕನಕಪುರ ರಸ್ತೆಯ ಕೋಣನಕುಂಟೆ ಗ್ರಾಮ ಈಗ ಜಗತ್ಪ್ರಸಿದ್ಧವಾಗಿದೆ. ಈ ಅಪಾರ ಜನಪ್ರಿಯತೆಗೆ ಶಿವರಸನ್-ಶುಭಾ ಈ ಕೋಣನಕುಂಟೆಯಲ್ಲಿ ಒಂದು ಕೊನೆಯುಸಿರೆಳೆದರೆಂಬ ಕಾರಣ ಮಾತ್ರ ಖಂಡಿತ ಇರಲಾರದು. ಬೆಂಗಳೂರು ಮಹಾನಗರದ ಜನ ನಗರ ಜೀವನದ ಜಂಜಾಟದಿಂದ ಬೇಸತ್ತು ನಗರದ ಹೊರವಲಯದಲ್ಲಿರುವ ಈ ಗ್ರಾಮಕ್ಕೆ ಬಂದು, ನಿವೇಶನ ಕೊಂಡು ಮನೆ ಕಟ್ಟಿಸತೊಡಗಿದರು, ಬ್ಯಾಂಕುಗಳು ಮತ್ತಿತರ ಹಣಕಾಸು ಸಂಸ್ಥೆಗಳು ಗೃಹ ನಿರ್ಮಾಣಕ್ಕೆ ಸಾಲಕೊಟ್ಟು ಈ ಸುಂದರ ಉಪನಗರದ ಬೆಳವಣಿಗೆಗೆ ಸಹಾಯ ಹಸ್ತ ನೀಡಿದವು.

ಮಕ್ಕಳ ಅಭಿವೃದ್ಧಿಗಾಗಿ ಶಾಲೆಗಳು ತೆರೆದಿವೆ, ಹಾಗೆಯೇ ಇಲ್ಲಿನ ಮಹಿಳೆಯರ ವಿಕಾಸಕ್ಕಾಗಿ ಕೋಣನಕುಂಟೆಯ ಉತ್ಸಾಹಿ ಮಹಿಳೆಯರು ಮುಂದೆ ಬಂದು ೧೯೮೯ ರಲ್ಲಿ "ಯಶಸ್ವಿ" ಮಹಿಳಾ ಸಮಾಜವನ್ನು ಸ್ಥಾಪಿಸಿದರು. ಸಣ್ಣ ಪ್ರಮಾಣದಲ್ಲಿ ಆರಂಭವಾದ ಸಮಾಜ ಈಗ ಹಲವು ಹತ್ತು ಕಾರ್ಯಕ್ರಮಗಳೊಂದಿಗೆ ಮುನ್ನಡೆದಿದೆ. ಕೋಣನಕುಂಟೆಯ ವಿದ್ಯಾವಂತ ಸ್ತ್ರೀಯರಿಗಷ್ಟೇ ಅಲ್ಲದೆ, ಗ್ರಾಮೀಣ ಮಹಿಳೆಯರಿಗೂ ಕೂಡಾ ಹೊಲಿಗೆ, ಕಸೂತಿ, ಪ್ಲಾಸ್ಟಿಕ್ ಬುಟ್ಟಿ ಹೆಣೆಯುವುದು, ಗೊಂಬೆ ಮಾಡುವುದು ಮುಂತಾದ ಕರಕುಶಲ ಕಲೆಗಳಲ್ಲಿ ತರಬೇತಿ ಕೊಡಲಾಗುತ್ತಿದೆ. ಗ್ರಾಮೀಣ ಮಹಿಳೆಯರ ವಿಕಾಸಕ್ಕಾ ಹಿಂದಿ ಮತ್ತು ಇಂಗ್ಲೀಷ್ ತರಗತಿಗಳನ್ನು ನಡೆಸಲಾಗುತ್ತಿದೆ. ಮಹಿಳೆಯರಿಗೆ ತಮ್ಮ ಸಾಂಸಾರಿಕ ಜಂಜಾಟಗಳಿಂದ ದೂರವಾಗಿ ಒಂದು ದಿನವಾದರೂ ಉಲ್ಲಾಸಮಯವಾಗಿ ಕಳೆದು ಬರಲು ಶೈಕ್ಷಣಿಕ ಪ್ರವಾಸಗಳನ್ನು ಏರ್ಪಡಿಸಲಾಯಿತು.

ಇತ್ತೀಚೆಗೆ ಯಶಸ್ವಿ ಮಹಿಳಾ ಸಮಾಜವು ತನ್ನ ಎರಡನೆಯ ವಾರ್ಷಿಕೋತ್ಸವವನ್ನು ಆಚರಿಸಿತು. ಕೋಣನಕುಂಟೆ ಬ್ಯಾಂಕ್ ಕಾಲೋನಿಯ ಮಹಿಳೆಯರ ಪ್ರತಿನಿಧಿಯಾಗಿ ಶ್ರೀಮತಿ ರೋಹಿಣಿ ರಾಜಗೋಪಾಲ್ ರವರು ಸಮಾಜದ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಕೋಣನಕುಂಟೆಯ "ಮಾರ್ಡನ್ ಇಂಗ್ಲೀಷ್ ಸ್ಕೂಲ್" ನ ಸಂಸ್ಥಾಪಕಿ, ಮುಖ್ಯೋಪಾಧ್ಯಾಯಿನಿ ಮತ್ತು ಶಿಕ್ಷಣ ತಜ್ಞೆ ಶ್ರೀಮತಿ ಜಯಶ್ರೀವಿಜಯ ರಾಘವನ್ ಮುಖ್ಯ ಅತಿಥಿಯಾಗಿ ಆಗಮಿಸಿದ್ದರು. ಯಶಸ್ವಿ ಮಹಿಳಾ ಸಮಾಜ ನಡಸಿದ ಕ್ರೀಡೆ ಮತ್ತು ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ಬಹುಮಾನ ವಿತರಣೆ ಮಾಡಿದರು. ಕಾರ್ಯಕ್ರಮದ ಕೊನೆಯಲ್ಲಿ ಸದಸ್ಯೆಯರ ಮತ್ತು ಅವರ ಮಕ್ಕಳ ಪ್ರತಿಭೆಗಳನ್ನು ಪ್ರದರ್ಶಿಸುವ ನೃತ್ಯ, ಸಮೂಹ ಗಾಯನ, ಏಕ ಪಾತ್ರಾಭಿನಯ ಮುಂತಾದ ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ನಿರೂಪಣೆ ಮಾಡಿದವರು ಯಶಸ್ವಿ ಮಹಿಳಾ ಸಮಾಜದ ಅಧ್ಯಕ್ಷೆ ಶ್ರೀಮತಿ ಮೈಥಿಲಿ ವರದರಾಜನ್‌ರವರು.

ಸಂಸ್ಥಾಪಕ ಕಾರ್ಯದರ್ಶಿ ಕುಮಾರಿ ಶಶಿಕಲಾ ಮತ್ತು ಸಮಾಜದ ಅಧ್ಯಕ್ಷೆ ಶ್ರೀಮತಿ ಮೈಥಿಲಿ ವರದ ರಾಜನ್‌ರವರ ನಿರಂತರ ಶ್ರಮದ ಫಲವಾಗಿ ಕೋಣನ ಕುಂಟೆ ಗ್ರಾಮದ ಇಪ್ಪತ್ತಕ್ಕೂ ಹೆಚ್ಚು ಮಹಿಳೆಯರಿಗೆ ಕಲೆ, ವಿಜ್ಞಾನ, ಭಾಷೆ ಮುಂತಾದ ವಿಷಯಗಳಲ್ಲಿ ತರ ಬೇತಿ ದೊರೆಯುತ್ತಿದೆ. ಕೋಣನಕುಂಟೆಯ ಮಹಿಳೆಯರ ಅಭಿವೃದ್ಧಿಯ ದೆಶೆಯಲ್ಲಿ ಮುನ್ನಡೆದಿರುವ "ಯಶಸ್ವಿ ಮಹಿಳಾ ಸಮಾಜ" ದ ಮೂಲಕ ಮಹಿಳೆಯರ ಅಭಿವೃದ್ಧಿಯೆಡೆಗೆ ಒಂದು ಬೃಹತ್ ಹೆಜ್ಜೆಯಾಗಲೆಂದು ಆಶಿಸೋಣ.

"ಹಿತೈಷಿ"

0 0 0 0 0 0 0

## ಬಿ. ಟಿ. ಎಸ್. ಬಸ್‌ಗಳಲ್ಲಿ ಮಹಿಳೆಯರ ಬವಣೆ

ಬಿ. ಟಿ. ಎಸ್. ಬಸ್‌ಗಳಲ್ಲಿ ಸ್ತ್ರೀಯರಿಗೆ ಸೀಟುಗಳನ್ನು ಮೀಸಲಾಗಿರಿಸಿದ್ದರೂ ಆ ಸೀಟುಗಳನ್ನೆಲ್ಲಾ ಸಂಪೂರ್ಣವಾಗಿ ಗಂಡಸರೇ ಆಕ್ರಮಿಸಿಕೊಳ್ಳುವ ಚಿತ್ರ ತೀರಾ ಸಾಮಾನ್ಯವಾಗಿದೆ.

ಒಂದು ದಿನ ನಾನು ನನ್ನ ಗೆಳತಿ ಬೆಳಿಗ್ಗೆ ೫-೪೫ ರ ಸುಮಾರಿಗೆ ಚನ್ನಸಂದ್ರದಿಂದ ಬಸ್ ಹತ್ತಿದೆವು. ಇಡೀ ಬಸ್‌ನಲ್ಲಿ ಇದ್ದದ್ದು ನಾವಿಬ್ಬರೇ ಮಹಿಳೆಯರು ಬಸ್ ನ ಎಲ್ಲಾ ಸೀಟುಗಳನ್ನು ಪುರುಷರೇ ಹಾಯಾಗಿ ಆಕ್ರಮಿಸಿಕೊಂಡು ಕುಳಿತಿದ್ದರು. ಮುಂದಿನ ಸೀಟಿನಲ್ಲಿ ಕುಳಿತ್ತಿದ್ದವನೊಬ್ಬ ತನ್ನ ಪಕ್ಕದಲ್ಲಿ ಗುಲಾಬಿ ಹೂವನ್ನು ತುಂಬಿದ ಒಂದು ದೊಡ್ಡ ಚೀಲವನ್ನು ಸೀಟಿನ ಮೇಲೆ ಇಟ್ಟುಕೊಂಡು ಕುಳಿತ್ತಿದ್ದ. ಅದನ್ನು ನೋಡಿದ ನನ್ನ ಗೆಳತಿ, ಈ ಚೀಲ ಯಾರದ್ದು, ಇರೋ ಹೆಂಗಸರ ಸೀಟುಗಳಲ್ಲಿ ನೀವು ಕುಳಿತಿರುವುದೂ ಅಲ್ಲದೆ, ನಿಮ್ಮ ಚೀಲಕ್ಕೂ ಜಾಗ ಬೇಕೆ? ಎಂದು ಕೇಳಿದಾಗ ಪಕ್ಕದಲ್ಲಿದ್ದಾತ, ಯಾರದ್ದೊ ಗೊತ್ತಿಲ್ಲಮ್ಮ ಕಂಡಕ್ಟರ್‌ನ ಕೇಳಿ ಎಂದು ಉತ್ತರಿಸಿದ. ಕಂಡೆಕ್ಟರ್ ಮಾತನಾಡದೆ ಟಿಕೇಟ್ ಕೊಡುತ್ತಿದ್ದ. ಸೀಟು ಇರೋದು ಜನರಿಗೆ ನಿಮ್ಮ ಚೀಲಕ್ಕಲ್ಲ ಎನ್ನುತ್ತಾ, ನಾನು ನನ್ನ ಗೆಳತಿ ಚೀಲವನ್ನು ಎತ್ತಿ ಕೆಳಗಿಡಲು ಪ್ರಯತ್ನಿಸುತ್ತಿದ್ದಂತೇ, ಪಕ್ಕದಲ್ಲಿ ಕುಳಿತ್ತಿದ್ದ ವ್ಯಕ್ತಿ, ನಾವು ದೂರದಿಂದ ಬಂದಿರೋರು. ನಮ್ಮ ಊರಿಂದ ಬರೋ ಬಸ್ಸು ಇದೊಂದೇ. ನಾವು ಬರ್ತೀವಿ ನಮ್ಮ ಲಗೇಜನ್ನು ಇಡ್ತೀವಿ ನೀವ್ಯಾರು ಅದನ್ನು ಕೇಳೋದಕ್ಕೆ ಎಂದು ದೊಡ್ಡ ದನಿಯಲ್ಲಿ ಕೂಗುತ್ತಾ, ಚೀಲವನ್ನು ಎತ್ತಿಡುತ್ತಿದ್ದ ನಮ್ಮ ಕೈಗಳನ್ನು ಬಲವಾಗಿ ತಳ್ಳಿದ. ಚೀಲವನ್ನು ಪುನಃ ಸೀಟಿನಲ್ಲಿ ಸರಿಯಾಗಿ ಇರಿಸಿದ, ಹೆಂಗಸರಿಗಾಗಿ ಇರೋ ಸೀಟಿನಲ್ಲಿ ಕುಳಿತುಕೊಂಡು ಹೀಗೆ ಮಾತಾಡ್ತೀರಲ್ಲ ಮೊದ್ಲು ಕೇಳಿದಾಗ ಬ್ಯಾಗು ನಮ್ದಲ್ಲ

ಎಂದು ಹೇಳಿದ್ರಿ ಎಂದು ಕೇಳುತ್ತಲೇ, ಏನಮ್ಮಾ ಮಾಡ್ತೀರಾ? ಏನು ಪೋಲೀಸ್ ಸ್ಟೇಷನ್‌ಗೆ ಹೋಗ್ತೀರಾ? ಹೌದು, ಚೀಲವನ್ನು ಎತ್ತಿ ಕೆಳಗಿಡದಿದ್ದರೆ ಹೋಗಬೇಕಾಗುತ್ತೆ? ಆಗ ನಿಮ್ಮನ್ನು ಎಬ್ಬಿಸಬೇಕಾಗುತ್ತೆ. ಈ ವ್ಯಕ್ತಿಯು ಹಿಂದೆ ಕುಳಿತಿದ್ದ ಇನ್ನೊಬ್ಬ ವ್ಯಕ್ತಿ ನಮ್ಮೂರಿಂದ ಬರೋ ಬಸ್ ಇದೊಂದೆ, ನಾವು ಸೀಟು ಬಿಡಲ್ಲ, ಏನು ಮಾಡ್ತೀರಾ? ಎಂದು ಸವಾಲೆಸೆದ ಆಯ್ತು ನಿಮ್ಮ ಊರಿಂದ ಬರೋ ಈ ಬಸ್ಸನ್ನು ಬೇರೆ ಯಾವ ಸ್ಟಾಪ್‌ಗಳಲ್ಲಿ ನಿಲ್ಲಿಸಬೇಡಿ ಸೀದಾ ಸಿಟಿ ಮಾರ್ಕೆಟ್‌ಗೆ ಹೋಗಿ ಅನ್ನುತ್ತಿದ್ದಂತೆ, ಅಲ್ಲಿದ್ದ ಒಂದಿಬ್ಬರು, ಏ ಏನೂಂತ ಮಾತಾಡ್ತಿಯ ಚೀಲ ಕೆಳಗಿಳಿಸಪ್ಪ ಎಂದು ಜೋರು ಮಾಡಿದಾಗ, ಚೀಲ ಎತ್ತಿ ಕೆಳಗಿಟ್ಟು ಸೀಟು ಕೊಡೋ ದೊಡ್ಡ ಮನಸು ಮಾಡಿದ, ಚೀಲ ಎತ್ತಿ ಕೆಳಗಿಡಲು ಇಷ್ಟು ತಕರಾರು ಮಾಡಿದ ವ್ಯಕ್ತಿಯನ್ನು ನೀನು ಕುಳಿತಿರು ಸೀಟು ಬಿಟ್ಟು ಕೊಡಯ್ಯ ಎಂದಿದ್ದರೆ ಕೊಡುತ್ತಿದ್ದನೆ?

ಇಷ್ಟೆಲ್ಲಾ ಗಲಾಟೆಯಾದರೂ, ಕಂಡಕ್ಟರ್ ಒಂದೂ ಮಾತನಾಡದೇ ಮೌನವಾಗೇ ಇದ್ದ.

ಕುಸುಮಾ,

ಒಂದು ದಿನ ಮಧ್ಯಾಹ್ನ ೩೧೯ ಬಸ್ ಹತ್ತಿದೆ ಸೀಟು ಸಿಗುವುದಿರಲ್ಲಿ ನಿಂತುಕೊಳ್ಳಲು ಜಾಗ ಇರಲಿಲ್ಲ, ಹೇಗೋ ದಾರಿ ಮಾಡಿಕೊಂಡು ಹಿಂದೆ ಹೋದೆ. ಮಹಿಳೆಯ ಸೀಟುಗಳಲ್ಲಿ ದಂಪತಿಗಳ ಜೋಡಿಗಳು ಮೂರು ಜೋಡಿಗಳು ಆರಾಮಾಗಿ ಕುಳಿತ್ತಿದ್ದವು. ಪಕ್ಕದಲ್ಲೂ ಅಷ್ಟೆ ಅಲ್ಲಿರುವ ಕಂಬಕ್ಕೊರಗಿ ವಯಸ್ಸಾದ ಮಹಿಳೆಯೊಬ್ಬಳು ಸುಮಾರು ೬ ೭ ವರ್ಷದ ಮಗುವನ್ನು ಹೆಗಲ ಮೇಲೆ ಹಾಕಿಕೊಂಡು ಕಂಬಕ್ಕೊರಗಿ ನಿಂತಿದ್ದಳು. ಅವಳೂ ಕಾಡುಗೋಡಿಗೆ ಹೋಗುವವಳು. ಮಗು ಅವಳ ಭುಜದ ಮೇಲೆ ಹಾಯಾಗಿ ಮಲಗಿ ಬಿಟ್ಟಿತ್ತು. ಪಕ್ಕದಲ್ಲಿರುವವರು ಯಾರೂ ಆ ವಯಸ್ಸಾದ ಮಹಿಳೆಯ ಸ್ಥಿತಿಯನ್ನು ನೋಡಿಯು ಕುರುಡರಂತಿದ್ದರು,

ಸ್ವಲ್ಪ ಹೊತ್ತು ಸುಮನಿದ್ದ ನಾನು ನೀನು ಸುಮ್ನೆ ನಿಂತಿದ್ರೆ ಯಾರೂ ಸ್ಥಳ ಕೊಡಲ್ಲ, ಕೇಳಮ್ಮ ಎಲ್ಲ ಹೆಂಗಸರ ಸೀಟಲ್ಲಿ ಗಂಡಸರೇ ಕುಳಿತ್ತಿದ್ದಾರೆ ಎಂದೆ. ಅಯ್ಯೋ ಯಾರು ಬಿಡ್ತಾರೆ ಬಿಡಮ್ಮ ಕೇಳಿದ್ರು ಬಿಡಲ್ಲ ಎಂದು ಸುಮ್ಮನಾದಳು. ಅಲ್ಲಿ ಕುಳಿತ್ತಿದ್ದವರಿಗೆ ಆ ಯಮ್ಮನಿಗೆ ಜಾಗ ಬಿಡ್ರಿ ಆ ಮಗುವನ್ನು ಹೊತ್ಕೊಂಡು ಎಷ್ಟು ಹೊತ್ತು ನಿಲ್ಲುವುದಕ್ಕಾಗುತ್ತೆ. ಎಂದು ಕೇಳಿದರೂ, ಆತ ಮಾತನಾಡಲಿಲ್ಲ, ನನ್ನ ಪಕ್ಕದಲ್ಲಿ ನಿಂತಿದ್ದವನೊಬ್ಬ ಅವರು ಫ್ಯಾಮಿಲಿ ಅಂದ್ರು ಫ್ಯಾಮಿಲಿ ಆದ್ರೆ ಏನಾಯ್ತು ಅಷ್ಟು ವಯಸ್ಸಾದವರಿಗೂ ಸೀಟು ಕೊಡಲು ಮನಸ್ಸು ಬರೋದಿಲ್ಲ. ನಿಮ್ಮ ಮನೆ ಹೆಣ್ಣು ಮಕ್ಕಳು ಹಾಗೆ ನಿಂತುಕೊಂಡಾಗ್ಲೂ ಇದೇ ಮಾತು ಹೇಳ್ತೀರಾ? ಜಾಗ ಬಿಡ್ಲಿಲ್ಲಾ ಅಂದ್ರೆ ಆ ಮಗುನ ಅಷ್ಟರ ಕೈಯಲ್ಲಿ ಕೊಡ್ರಿ ಎಂದಾಗ್ಲೂ ಅವರು ಮಿಸುಕಾಡಲಿಲ್ಲ, ಕೊನೆಗೆ, ಆ ಮಹಿಳೆಯನ್ನೆ ಏನಮ್ಮ ಸ್ವಲ್ಪ ಸ್ಥಳ ಬಿಡೋಕೆ ಆಗ್ದೆ ಇದ್ರು ಆ ಮಗುವನ್ನು ಕೂರಿಸಿಕೊಳ್ಳಲಾಗಲ್ವೆ ಎಂದಾಗ, ಆಕೆ ಸ್ವಲ್ಪ ಒತ್ತರಿಸಿಕೊಂಡು ಜಾಗಬಿಟ್ಟಳು.

ವೈಟ್ ಫೀಲ್ಡ್ ಸ್ಟಾಪ್ ಬರುತ್ತಿದ್ದ ಹಾಗೆ, ಆ ಪಕ್ಕಕ್ಕೆ ಕುಳಿತಿದ್ದ ಆತ ಇಳಿದು ಹೋದ ಆತನ ಪಕ್ಕಕ್ಕೆ ಕುಳಿತ ಅವಳು ಮುಂದಿನ ಸ್ಟಾಪ್‌ನಲ್ಲಿ ಇಳಿದು ಹೋದಳು. ಹೇಗಿದೆ ಬಸ್‌ನಲ್ಲಿ ಸೀಟು ಪಡೆಯಲು ಫ್ಯಾಮಿಲಿ ಐಡಿಯಾ?

ಸುಮಾ.
ಕಾಡುಗೋಡಿ.

6 ನೇ ಪುಟದಿಂದ

ಪತ್ರಿಕೆಯ ಪ್ರಕಟಣೆಯ ಕಾರ್ಯವೆಂದರೆ ಕೇವಲ ಪತ್ರಿಕೆಯನ್ನು ಸಂಪಾದಿಸುವುದಾಗಿರಲಿಲ್ಲ. ಹಲವಾರು ಜವಾಬ್ದಾರಿ ಹೊತ್ತ ಕಲ್ಯಾಣಮ್ಮನವರಿಗೆ ಪತ್ರಿಕೆಯ ಕೆಲಸ ಅವರ ಹೆಗಲಮೇಲೆ ಬಲವಾದ ಹೊರೆಯನ್ನೆ ಹೊರಿಸಿತು. ಆದರೆ ಇದು ಅವರಿಗೆ ಅತ್ಯಂತ ಪ್ರಿಯವಾದ ಹೊರೆಯೇ ಆಗಿತ್ತು.

ಪತ್ರಿಕೆಗೆ ಬೇಕಾದ ಲೇಖನಗಳನ್ನು ಬರೆಯುವುದು, ಬರಹಗಾರರನ್ನು ಸಂಪರ್ಕಿಸುವುದು, ಪತ್ರಿಕೆಯ ಸಂಪಾದಕೀಯವನ್ನು ಬರೆಯುವುದು, ಇತರ ಲೇಖನಗಳನ್ನು ಸ್ವತಃ ಬರೆಯುವುದು, ಮುಂತಾದ ಕೆಲಸಗಳ ಜೊತೆಗೆ ಪತ್ರಿಕೆಯ ಪ್ರಿಂಟಿಂಗ್ ಕೆಲಸ, ಪೇಪರ್ ಹೊಂದಿಸುವುದು, ಪತ್ರಿಕೆಗೆ ಬೇಕಾದ ಹಣವನ್ನು ಜಾಹಿರಾತು, ಚಂದಾದ ಮೂಲಕ ಹಣ ಸಂಗ್ರಹಿಸುವುದು, ಪ್ರೂಫ್ ನೋಡುವುದು ಎಲ್ಲಾ ಕೆಲಸಗಳೂ ಕಲ್ಯಾಣಮ್ಮನವರ ಪಾಲಿಗೆ.

ಕಲ್ಯಾಣಮ್ಮನವರು ಒಬ್ಬಂಟಿಯಾಗಿ ಹೊತ್ತಿದ್ದ ಪತ್ರಿಕೆಯ ಪ್ರಕಟಣೆಯ ಕೆಲಸವನ್ನು ಕೊನೆಯ ಹಂತದಲ್ಲಿ ಸುಮಾರು ೧೦ ವರ್ಷಗಳ ಕಾಲ ಲಲಿತಮ್ಮನವರು ಹಂಚಿಕೊಂಡರು. ಆದರೆ ಲಲಿತಮ್ಮನವರ ನಿಧನದಿಂದ ಪತ್ರಿಕೆಯ ಪ್ರಕಟಣೆಯೂ ನಿಂತು ಹೋಯಿತು. ಇದು ಕಲ್ಯಾಣಮ್ಮನವರಲ್ಲಿ ದೊಡ್ಡ ಆಘಾತವನ್ನು ಉಂಟುಮಾಡಿತು. ಪತ್ರಿಕೆಯನ್ನು ಮುಂದು ವರಿಸಲೇಬೇಕೆಂಬ ಉದ್ದೇಶದಿಂದ ಹಲವರನ್ನು ಸಂಪರ್ಕಿಸಿ ಪತ್ರಿಕೆಯ ಪ್ರಕಟನೆಯನ್ನು ಮುಂದುವರಿಸಬೇಕೆಂದು ಕೇಳಿಕೊಂಡರೂ ಅವರ ಆಸೆ ಕೈ ಗೂಡಲಿಲ್ಲ. ಪತ್ರಿಕೆಯ ಪ್ರಕಟನೆ ನಿಂತು ಹೋಯಿತು. ಇಂದಿಗೂ ಸರಸ್ವತಿ ಮಹಿಳಾ ಪತ್ರಿಕಾ ಪ್ರಕಟಣೆಯ ಹಾದಿಯಲ್ಲಿ ಒಂದು ಮೈಲುಗಲ್ಲು ಎಂದರೆ ತಪ್ಪಾಗಲಾರದು.

## ಸೃಜನಾತ್ಮಕ ಬರವಣಿಗೆಗಳು

ಸಂಘ-ಸಂಸ್ಥೆಗಳ ಸ್ಥಾಪನೆ, ಪತ್ರಿಕೆಯ ಪ್ರಕಟನೆ ಮುಂತಾದ ಕಾರ್ಯಚಟುವಟಿಕೆಗಳಲ್ಲಿ ಕಲ್ಯಾಣಮ್ಮ ಸಂಪೂರ್ಣವಾಗಿ ಮುಳುಗಿ ಹೋಗಿದ್ದರೂ, ಅವರು ತಮ್ಮನ್ನು ತಾವು ಮರೆಯಲಿಲ್ಲ. ತಮ್ಮ ಎದೆಯೊಳಗೆ ನೋವನ್ನು ಒಂದು ಸಾಮಾಜಿಕ ಚೌಕಟ್ಟಿನಲ್ಲಿ ಬರವಣಿಗೆಯ ಮೂಲಕ ಅಭಿವ್ಯಕ್ತಿ ಪಡಿಸಿದರು.

ಅವರ ಕೃತಿಗಳು ಪ್ರಾರಂಭವಾಗುವುದೇ ಸಾಮಾಜಿಕ ನೆಲೆಯಿಂದ ಇದು ಕಲ್ಯಾಣಮ್ಮನವರು ಹೊಂದಿದ್ದ ಜೀವನ ದೃಷ್ಟಿಕೋನವನ್ನು ಪ್ರತಿಬಿಂಬಿಸುತ್ತದೆ. ಅವರ ಬರವಣಿಗೆಗಳು ವೈವಿಧ್ಯಮಯವಾಗಿದ್ದವು. ಸಾಮಾಜಿಕ ಕಾದಂಬರಿ, ಐತಿಹಾಸಿಕ ಕಾದಂಬರಿ, ಸಣ್ಣ ಕತೆಗಳು, ನಾಟಕ, ಮಕ್ಕಳ ಸಾಹಿತ್ಯ, ಲೇಖನಗಳನ್ನು ರಚಿಸಿದ್ದಾರೆ.

ಕಲ್ಯಾಣಮ್ಮನವರು ಕನ್ನಡದ ವಿವಿಧ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುವುದರ ಮೂಲಕ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರು. ಅವರ ಬರವಣಿಗೆಗೆ ಸಿಕ್ಕ ಪ್ರೋತ್ಸಾಹದಿಂದ ಅವರು ಕಾದಂಬರಿಗಳನ್ನು ಬರೆಯುವುದಕ್ಕೆ ಪೂರಕವಾಯಿತು. ಕಲ್ಯಾಣಮ್ಮನವರು ಮೊದಲು ಬರೆದ ಕಾದಂಬರಿ "ಪ್ರಿಯಂವದೆ" ತಾವು ಬರೆದ ಮೊದಲ ಕಾದಂಬರಿಯಲ್ಲಿ ಕಲ್ಯಾಣಮ್ಮನವರು ವರದಕ್ಷಿಣೆಯ ಪದ್ಧತಿಯ ಬಗ್ಗೆ, ಅದರಿಂದುಂಟಾಗುವ ದುರಂತಗಳ ಬಗ್ಗೆ ಚಿತ್ರಿಸಿದ್ದಾರೆ. ಅವರ ಇನ್ನೊಂದು ಮಹತ್ವದ ಕಾದಂಬರಿ "ಇಂದಿರ" ಯಲ್ಲಿ ವಿಧವೆಯ ಸ್ಥಿತಿಗತಿಗಳನ್ನು ಓದುಗರ ಮುಂದಿಟ್ಟಿದ್ದಾರೆ.

ಸರಸ್ವತಿ ಪತ್ರಿಕೆಯ ಸಂಪಾದಕರಾಗಿದ್ದ ಕಲ್ಯಾಣಮ್ಮ ಪತ್ರಿಕೆಗಾಗಿ ಲೇಖನಗಳನ್ನು ಬರೆದಿದ್ದಾರೆ, ವಿವಿಧ ವಿಷಯಗಳ ಬಗ್ಗೆ ಲೇಖನಗಳನ್ನು ಬರೆಯುವುದರ ಜೊತೆಗೆ ಮಕ್ಕಳ ಸಾಹಿತ್ಯಕ್ಕೆ ಅಪಾರವಾದ ಕೊಡಿಗೆಯನ್ನು ನೀಡಿದ್ದಾರೆ. ಒಂದು ಶತಮಾನದ ಹಿಂದೆ ಮಹಿಳೆಯೊಬ್ಬಳು ತನ್ನ ಸ್ವಪ್ರಯತ್ನದಿಂದ ಸಾಧಿಸಿದ ಸಾಧನೆಗಳು ಆಶ್ಚರ್ಯಕರವಾಗಿದೆ. ಸ್ತ್ರೀಯರ ಹೋರಾಟದ ಬದುಕಿನಲ್ಲಿ ಕಲ್ಯಾಣಮ್ಮನವರ ಜೀವನ ಚರಿತ್ರೆ ಒಂದು ಮಾದರಿಯಾಗಿದೆ. ಅವರ ಜೀವನ ಕಾರ್ಯಚಟುವಟಿಕೆಗಳು, ಮುಖ್ಯವಾಗಿ ಅವರ ಬರವಣಿಗೆಗಳು, ಇಂದಿಗೂ ಸ್ಫೂರ್ತಿ ನೀಡಬಲ್ಲವೆಂದರೆ ಅತಿಶಯೋಕ್ತಿಯೇನಲ್ಲ.

ರಾಜೇಶ್ವರಿ. ಎಚ್. ಎಸ್.

REGD No KRNA 271

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : " ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067